

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



Vol-14 October - 2016 Issue No. 10 ₹ 10/-



## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಸಮಸ್ತರಿಗೆ ದೀಪಾವಳಿ ಹಾಗೂ ರಾಜ್ಯೋತ್ಸವ ಶುಭಾಶಯಗಳು



**Sri Siddaramaiah, Hon'ble Chief Minister of Karnataka, Sri H.K. Patil, Hon'ble Minister for RDPR and Sri P.G.R. Sindhia, Former Minister & State Chief Commissioner, Karnataka called on Hon'ble President of India Sri Pranab Mukherjee to invite him for the Inauguration of the 17th National Jamboree to be held during December 2016 at Mysuru.**




15 ಅಕ್ಟೋಬರ್ 2016ರಂದು ಮಂಗಳೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಜೋಟಾ-ಜೋಟಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳನ್ನು ಕಾಣಬಹುದು.



15 ಅಕ್ಟೋಬರ್ 2016ರಂದು ಉಡುಪಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಜೋಟಾ-ಜೋಟಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



Sri Siddaramaiah, Hon'ble Chief Minister of Karnataka and President, Bharat Scouts and Guides, Karnataka was briefed about the arrangements for the ensuing 17th National Jamboree at Mysuru on 05.10.2016 at Vidhana Soudha. Dr. H.C. Mahadevappa, Hon'ble Minister for Public Works and District incharge Minister of Mysuru, Sri U.T. Khader, Hon'ble Minister for Food & Civil Supplies, Sri Ramanatha Rai, Hon'ble Minister for Forest, Ecology & Environment Department, Sri Tanveer Sait, Hon'ble Minister for Primary and Secondary Education, Sri. B.I. Nagarale, Chief National Commissioner, Bharat Scouts & Guides, Sri P.G.R. Sindhia, State Chief Commissioner, Karnataka. Sri Kondajji B. Shanmukhappa Vice-President, Sri M.A. Khalid, State Commissioner(S), Sri K. Sukumara, Director, National Headquarters are seen.




2.10.2016ರಂದು ಶಾಂತಿಗೃಹದಲ್ಲಿ ಗಾಂಧಿಜಯಂತಿ ಪ್ರಯುಕ್ತ ಹಮ್ಮಿಕೊಳ್ಳಲಾಗಿದ್ದ ಸರ್ವಧರ್ಮ ಪ್ರಾರ್ಥನೆಯಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ರಾಜ್ಯ ಪದಾಧಿಕಾರಿಗಳು ಹಾಗೂ ಇತರರನ್ನು ಕಾಣಬಹುದು.



ಅಕ್ಟೋಬರ್ 15ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ ಜೋಟ-ಜೋಟಿ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿರುವುದು.



ಅಕ್ಟೋಬರ್ 17ರಂದು ಕೊಡಗು ಜಿಲ್ಲೆಯ ತಲಕಾವೇರಿಯಲ್ಲಿ ಜರುಗಿದ ಕಾವೇರಿ ಮಾತೆಯ ಜಾತ್ರೆಯಲ್ಲಿ (ತಿರ್ಥೋದ್ಭವ ಸಂದರ್ಭದಲ್ಲಿ) ರೋವರ್ಸ್‌ಗಳು ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಿದರು.




08 ಸೆಪ್ಟೆಂಬರ್ 2016ರಂದು ಎಸ್.ಡಿ.ಎಮ್. ಆಂಗ್ಲ ಮಾಧ್ಯಮ ಶಾಲೆ, ಬೆಳ್ತಂಗಡಿಯ ಬುಲ್‌ಬುಲ್ಸ್‌ಗಳು ಬೆಳ್ತಂಗಡಿ ಆರಕ್ಷಕ ಠಾಣೆಗೆ ಭೇಟಿ ನೀಡಿ ಮಾಹಿತಿ ಪಡೆದರು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



**ಪರಿವಿಡಿ**




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್
The Bharat Scouts-Guides Karnataka




ಭಾರತದ
ಪ್ರತಿಯೊಂದು ಮನೆಯಲ್ಲೂ
ಸ್ಕೌಟ್ ಮತ್ತು ಗೈಡ್‌ಗಳಂತಹ
ಮಕ್ಕಳಿರಬೇಕೆಂದು
ನಾನು ಅಪೇಕ್ಷಿಸುತ್ತೇನೆ
– ಮಹಾತ್ಮ ಗಾಂಧಿ

# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

"ಈಗ ಎಲ್ಲರ ಚಿತ್ತ; ಜಾಂಬೂರಿಯತ್ತ", 29 ಡಿಸೆಂಬರ್ 2016 ರಿಂದ 04 ಜನವರಿ 2017 ರವರೆಗೆ, ಮೈಸೂರಿನ ಅಡಕನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯ ಸಮಾವೇಶ. ರಾಷ್ಟ್ರದ ಮೂಲೆ ಮೂಲೆಯಿಂದ, ಅಷ್ಟೇಕೆ ವಿಶ್ವದ ಎಲ್ಲೆಡೆಯಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೂರಿಗೆ ಆಗಮಿಸಲಿದ್ದಾರೆ. ಜಾಂಬೂರಿ ಎಂದರೆ, ಸಂತಸವನ್ನು ಹಂಚಿಕೊಳ್ಳುವ ಸಮಯ. ದೇಶದ, ಪ್ರಪಂಚದ ಬೇರೆ ಭಾಗದಿಂದ ಬಂದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳೊಂದಿಗೆ ಬೆರೆತು ಆಟವಾಡುವ ಸಮಯ. ನಾವು ಕಲಿತ ಸ್ಕೌಟಿಂಗ್, ತನ್ಮೂಲಕ ಸಮಾಜದೊಂದಿಗೆ ನಾವು ವಿಕಾಸವಾಗುವ ಅಪೂರ್ವವಾದ ಕ್ರಿಯೆಯನ್ನು ಇತರರಿಗೆ ತೋರ್ಪಡಿಸುವ ಸಮಯ. ನಮ್ಮ ಕುಟುಂಬ ಮತ್ತು ಗೆಳೆಯರ ವೃತ್ತದ ಮಿತಿಗಳನ್ನು ದಾಟಿ "ವಸುಧೈವ ಕುಟುಂಬಕಂ" ಎಂಬ ವಿಶ್ವಭ್ರಾತೃತ್ವದ ಭಾಷೆಯನ್ನು ಕಲಿಯುವ ಸುಸಮಯ. ಸ್ವಾಮಿ ವಿವೇಕಾನಂದರು ಹೇಳಿದಂತೆ "ವ್ಯಕ್ತಿವಿಕಾಸದೊಂದಿಗೆ ಸಾಮಾಜಿಕ ವಿಕಾಸವೂ ಆಗಬೇಕು" ಎಂಬ ಉಪನಿಷತ್ತಿನ ವಾಕ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವ ಸಮಯ. ನಮ್ಮ ಕೌಶಲ್ಯಗಳ ಪ್ರದರ್ಶನಕ್ಕೆ ಜಾಂಬೂರಿ ಅಪೂರ್ವ ಅವಕಾಶವನ್ನು ಒದಗಿಸುತ್ತದೆ. ಜೊತೆಗೆ ಸಮುದಾಯದ ಸೇವೆಗೆ ಮತ್ತೆ ಕಂಕಣಬದ್ಧರಾಗಲು ಸ್ಫೂರ್ತಿಯನ್ನು ನೀಡುತ್ತದೆ.



ರಾಷ್ಟ್ರೀಯ ಜಾಂಬೂರಿಯಲ್ಲಿ ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳಿರುತ್ತವೆ. ವಿಶೇಷವಾಗಿ ಸ್ಪರ್ಧಾತ್ಮಕವಾದ ಮೋಜಿನ ಆಟಗಳು, ಸಾಹಸಮಯ ಚಟುವಟಿಕೆಗಳು, ಸೇವಾ ಕಾರ್ಯಗಳು, ರಾಷ್ಟ್ರೀಯ ಭಾವೈಕ್ಯತೆಯನ್ನು ಉದ್ದೀಪಿಸುವ ಕಾರ್ಯಕ್ರಮಗಳು, ವಿಶ್ವಗ್ರಾಮದ ಕಲ್ಪನೆಯ ಸಾಕಾರ, ಸ್ನೇಹ, ಬಂಧುತ್ವ, ಗೆಳೆತನ ಮತ್ತು ಪ್ರೇಮದ ಸಂದೇಶವನ್ನು ಜಗತ್ತಿಗೆ ಹಂಚುವ ಕಾರ್ಯ ಜಾಂಬೂರಿಯಲ್ಲಾಗುತ್ತದೆ. ಜೊತೆಗೆ ಗುಂಪು ಚಟುವಟಿಕೆಗಳಲ್ಲಿ ಶಿಬಿರದ ಕಲೆ, ಶಿಬಿರಾಗ್ನಿ, ರಂಗೋಲಿ, ಅಗ್ರಗಾಮಿ ಯೋಜನೆಗಳು, ಪಥಸಂಚಲನ, ಬಣ್ಣದ ಆಟ, ಜಾನಪದ ನೃತ್ಯ, ದೈಹಿಕ ಕಸರತ್ತು, ಸಾಂಸ್ಕೃತಿಕ ಮೆರವಣಿಗೆ, ಬ್ಯಾಂಡ್ ಪ್ರದರ್ಶನ, ಮುಂತಾದ ಹಲವಾರು ಆಕರ್ಷಣೀಯ ಚಟುವಟಿಕೆಗಳಿರುತ್ತವೆ.

ಭಾರತದ ಘನವೆತ್ತ ರಾಷ್ಟ್ರಾಧ್ಯಕ್ಷರಾದ ಸನ್ಮಾನ್ಯ ಪ್ರಣಬ್ ಕುಮಾರ್ ಮುಖರ್ಜಿ ಅವರು ರಾಷ್ಟ್ರೀಯ ಜಾಂಬೂರಿಯನ್ನು





ಉದ್ಘಾಟಿಸಲು ಬರಲಿದ್ದಾರೆ. ಕರ್ನಾಟಕದ ಘನವೆತ್ತ ರಾಜ್ಯಪಾಲ ಸನ್ಮಾನ್ಯ ವಾಜುಬಾಯಿ ರೂಢಾಬಾಯಿ ವಾಲ, ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯ, ಭಾರತ ಸರ್ಕಾರದ ಮಾನ್ಯ ಮಂತ್ರಿಗಳು ಮತ್ತು ಹಲವಾರು ಗಣ್ಯರನ್ನು, ಮಾನ್ಯರನ್ನು ಮುಖತಃ ಭೇಟಿಮಾಡುವ, ಪರಸ್ಪರ ಸ್ಪಂದಿಸುವ ಮತ್ತು



ಅವರ ಮಾತುಗಳನ್ನು ಕೇಳಿ ದೈನಂದಿನ ಜೀವನದಲ್ಲಿ ಅಳವಡಿಸಿಕೊಳ್ಳುವ ಅವಕಾಶ ನಮ್ಮ ಮಕ್ಕಳಿಗೆ ದೊರೆಯುತ್ತಿದೆ. ಜೀವಮಾನದಲ್ಲೊಮ್ಮೆ ಸಿಕ್ಕುವ ಇಂತಹ ಅಪೂರ್ವ ಅವಕಾಶಗಳು ನಮ್ಮ ಬದುಕಿನ ಹಾದಿಯುದ್ದಕ್ಕೂ ಸ್ಫೂರ್ತಿಯನ್ನು ತುಂಬುತ್ತದೆ ಎಂಬುದು ನನ್ನ ಸ್ವಂತ ಅನಿಸಿಕೆ. ಇತರರಿಗೂ ಖಂಡಿತವಾಗಿ ಇದೇ ರೀತಿಯ ಭಾವನೆ ಮೂಡಿದ್ದರೆ ಆಶ್ಚರ್ಯವಿಲ್ಲ.



ಕರ್ನಾಟಕಕ್ಕೆ, ರಾಷ್ಟ್ರೀಯ ಜಾಂಬೂರಿಯನ್ನು ನಡೆಸಲು ಸಿಕ್ಕ ಮೂರನೆಯ ಅವಕಾಶವಿದು. 1960ರಲ್ಲಿ ಮತ್ತು 1986ರಲ್ಲಿ, ಮೂರನೆಯ ಮತ್ತು ಹತ್ತನೆಯ ರಾಷ್ಟ್ರೀಯ ಜಾಂಬೂರಿಗಳು ಬೆಂಗಳೂರಿನಲ್ಲಿ ನಡೆದವು. ಈ ಬಾರಿ ಅವಕಾಶ ಮೈಸೂರಿಗೆ. ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆಂದೇ ಪ್ರಸಿದ್ಧವಾದ ಮೈಸೂರು, ಕರ್ನಾಟಕ ಮತ್ತು ಭಾರತದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯ ಪ್ರತಿಬಿಂಬವಾಗಿದೆ. ಸುಮಾರು ಐದು ಶತಮಾನಗಳ ಕಾಲ ಮೈಸೂರನ್ನು ಆಳಿದ ಒಡೆಯರ್ ವಂಶಜರು, ಅಂದಿನ ಮೈಸೂರು ರಾಜ್ಯವನ್ನು "ಮಾದರಿ ಮೈಸೂರು" ರಾಜ್ಯವನ್ನಾಗಿ ರೂಪಿಸಿದರು. ಭಾರತದಲ್ಲಿ ಸ್ಕೌಟಿಂಗ್ ಮೊದಲು ಆರಂಭವಾದದ್ದು ಬೆಂಗಳೂರಿನಲ್ಲಿ, 1909ರಲ್ಲಿ. ಅಂದಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಕರ್ನಾಟಕದಲ್ಲಿ ಸ್ಕೌಟಿಂಗ್‌ಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದರು. ಶ್ರೀ ಜಯಚಾಮರಾಜ ಒಡೆಯರ್ ಅವರು ಕರ್ನಾಟಕದ ಮೊದಲ ಕಬ್ ಎಂಬುದು ನಮಗೆಲ್ಲಾ ಸಂತಸವನ್ನು ನೀಡುವ ವಿಷಯವಾಗಿದೆ.

ರಾಷ್ಟ್ರೀಯ ಜಾಂಬೂರಿಯ ಸಂತಸದ ಜೊತೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕದ ಜವಾಬ್ದಾರಿಯು ಹೆಚ್ಚು. ನಾವು ಅತಿಥೇಯರು. ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸುವ ಮೂವತ್ತು ಸಾವಿರ ಜನರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾಗಿದೆ. ಅವರನ್ನು ಸ್ವಾಗತಿಸುವ, ಉಳಿದುಕೊಳ್ಳುವ, ಕ್ರಿಯಾಶೀಲವಾಗಿ ಭಾಗವಹಿಸುವಂತೆ ಕಾರ್ಯಕ್ರಮಗಳನ್ನು ರೂಪಿಸುವ ಕೆಲಸ ನಮ್ಮದು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಕರ್ನಾಟಕ ರಾಜ್ಯದ ಅಧ್ಯಕ್ಷರಾದ ಕರ್ನಾಟಕದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಸಿದ್ದರಾಮಯ್ಯನವರು ರಾಷ್ಟ್ರೀಯ ಜಾಂಬೂರಿಯನ್ನು ಸಂಘಟಿಸುವುದರಲ್ಲಿ ಅಪಾರವಾದ ಆಸಕ್ತಿಯನ್ನು ತೋರಿಸಿದ್ದಾರೆ. ಕರ್ನಾಟಕ ಸರ್ಕಾರದ ಸಂಪೂರ್ಣ ಸಹಕಾರ ನಮಗಿದೆ. ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರಾದ ಸನ್ಮಾನ್ಯ ಡಾ॥ ಎಚ್.ಸಿ. ಮಹದೇವಪ್ಪ, ಸನ್ಮಾನ್ಯ ಶ್ರೀ ತನ್ವೀರ್ ಸೇಠ್, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು, ಸನ್ಮಾನ್ಯ ಶ್ರೀ ಬಸವರಾಜ ರಾಯರೆಡ್ಡಿ, ಮಾನ್ಯ ಉನ್ನತ ಶಿಕ್ಷಣ ಸಚಿವರು ಸನ್ಮಾನ್ಯ ಶ್ರೀ ಎಚ್.ಎಸ್. ಮಹದೇವ ಪ್ರಸಾದ್, ಸಹಕಾರ ಮತ್ತು ಸಕ್ಕರೆ ಇಲಾಖೆ ಸಚಿವರು ಸೇರಿದಂತೆ ಸರ್ಕಾರದ ಎಲ್ಲಾ ಸಚಿವರು, ಹಿರಿಯ, ಕಿರಿಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗ ಸಂಘಟನೆಯ ಕಾರ್ಯದಲ್ಲಿ ಸಂತೋಷದಿಂದ ಪಾಲ್ಗೊಳ್ಳುತ್ತಿದ್ದಾರೆ.



ಸೆಪ್ಟೆಂಬರ್ 27 ರಂದು ಮೈಸೂರಿನಲ್ಲಿ ಜಾಂಬೂರಿಗೆ ಸಂಬಂಧಿಸಿದಂತೆ ಮೊದಲ ಸಂಘಟನಾ ಸಭೆ ನಡೆಯಿತು. ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯ ಡಾ॥ ಎಚ್.ಸಿ. ಮಹದೇವಪ್ಪ ಅವರು ಸಭೆಯ ಅಧ್ಯಕ್ಷತೆಯನ್ನು ವಹಿಸಿ ರಾಷ್ಟ್ರೀಯ ಜಾಂಬೂರಿಗೆ ಅಗತ್ಯವಾದ ಸ್ಥಳ ಸಿದ್ಧತೆ ಮತ್ತು ಇತರ ವಿಚಾರಗಳ ಬಗ್ಗೆ ಜಿಲ್ಲಾಧಿಕಾರಿ ಶ್ರೀ ಡಿ. ರಂದೀಪ್, ಭಾ.ಆ.ಸೇ., ಮತ್ತು ಇತರ ಹಿರಿಯ ಅಧಿಕಾರಿಗಳೊಂದಿಗೆ ಚರ್ಚಿಸಿದರು. ನಾನು ಮತ್ತು ನಮ್ಮ ಸಂಸ್ಥೆಯ ರಾಜ್ಯ ಪದಾಧಿಕಾರಿಗಳು ಮತ್ತು ಮೈಸೂರು ಜಿಲ್ಲಾ ಪದಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದೆವು. ಸನ್ಮಾನ್ಯ ಮಂತ್ರಿಗಳು ರಾಷ್ಟ್ರೀಯ ಜಾಂಬೂರಿಯ ಸಿದ್ಧತೆಗೆ ಬಹಳ ಉತ್ತೇಜನವನ್ನು ನೀಡಿದರು.

ಅಕ್ಟೋಬರ್ 5ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಗರಾಳೆ, ನಾನು ಮತ್ತು ಇತರೆ ಪದಾಧಿಕಾರಿಗಳು ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯ ನವರನ್ನು ಭೇಟಿ ಮಾಡಿದ್ದೆವು. ಶ್ರೀ ಅಜಯ್ ಸೇಠ್, ಭಾ.ಆ.ಸೇ., ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಡಾ॥ ಪಿ.ಸಿ.ಜಾಫರ್,ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ ಮತ್ತು ಸಂಯೋಜನಕರು 17ನೇ ರಾಷ್ಟ್ರೀಯ ಜಾಂಬೂರಿ ಮತ್ತು ಶ್ರೀ ಡಿ. ರಂದೀಪ್, ಭಾ.ಆ.ಸೇ., ಮಾನ್ಯ ಜಿಲ್ಲಾಧಿಕಾರಿಗಳು, ಮೈಸೂರು ಇವರುಗಳನ್ನೂ ಭೇಟಿಮಾಡಿದೆವು. ಫಲಪ್ರದವಾದ ಈ ಭೇಟಿಗಳು ರಾಷ್ಟ್ರೀಯ ಜಾಂಬೂರಿಯ ಯಶಸ್ಸಿಗೆ ಮುನ್ಸೂಚನೆಯಾಗಿದೆ.

ಜಾಂಬೂರಿಯ ಸಂದರ್ಭದಲ್ಲಿ ಸೇವಾ ಕಾರ್ಯವನ್ನು ಸ್ವಂತ ಆಸಕ್ತಿಯಿಂದ ವಹಿಸಿಕೊಳ್ಳಲು ಕರ್ನಾಟಕದಿಂದ 200 ರೋವರ್ಸ್–ರೇಂಜರ್ಸ್ ಅವಶ್ಯಕತೆ ಇದೆ. ಅವರುಗಳು ದಿನಾಂಕ: 24.12.2016 ರಿಂದ 07.01.2017ರವರೆಗೆ ಸೇವೆಯನ್ನು ಸಲ್ಲಿಸಬೇಕಾಗಿದೆ. ದೈಹಿಕವಾಗಿ ಕಠಿಣ ಕೆಲಸಗಳನ್ನು ದಿನಕ್ಕೆ 12 ರಿಂದ 14 ಗಂಟೆಗಳ ತನಕ ನಿಭಾಯಿಸಬಲ್ಲ, ಸರಾಗವಾಗಿ ಇಂಗ್ಲೀಷ್, ಹಿಂದಿ ಮಾತನಾಡಬಲ್ಲ ನಿಪುಣ್ / ರಾಜ್ಯ ಪುರಸ್ಕಾರವನ್ನು ಗಳಿಸಿರುವ ರೋವರ್ / ರೇಂಜರ್‌ಗಳು ದಿನಾಂಕ: 28.10.2016ರ ಒಳಗಾಗಿ ನಮಗೆ ಅರ್ಜಿಯನ್ನು ಸಲ್ಲಿಸಬೇಕು. ಸ್ವಯಂಸೇವಕರ ಅಂತಿಮ ಪಟ್ಟಿಯನ್ನು ತೀರ್ಮಾನ ಮಾಡುವ ಜವಾಬ್ದಾರಿಯನ್ನು ರಾಷ್ಟ್ರೀಯ ಕಾರ್ಯಾಲಯವು ವಹಿಸಿಕೊಂಡಿದೆ.

ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಲು 33 ಜಿಲ್ಲೆಗಳಿಗೆ ಕೋಟಾವನ್ನು ಈಗಾಗಲೇ ನಿಗಧಿ ಮಾಡಿ, ಪಟ್ಟಿಯನ್ನು ಕಳುಹಿಸಲು ಜಿಲ್ಲಾ ಘಟಕಗಳಿಗೆ ಸೂಚಿಸಲಾಗಿದೆ. ಅದಕ್ಕೆ ಸಂಬಂಧಿಸಿದ ಸಾರ್ವಜನಿಕ ಶಿಕ್ಷಣ ಇಲಾಖೆಯ ಸುತ್ತೋಲೆಯನ್ನು ಜಿಲ್ಲಾಸಂಸ್ಥೆಗಳಿಗೆ ಕಳುಹಿಸಿದ್ದೇವೆ. ಆದುದರಿಂದ ಜಿಲ್ಲಾ ಕಾರ್ಯದರ್ಶಿಗಳು ತಕ್ಷಣದಲ್ಲಿ ಕಾರ್ಯಪ್ರವೃತ್ತರಾಗಬೇಕೆಂದು ನಾನು ಮನವಿ ಮಾಡುತ್ತೇನೆ. ರಾಷ್ಟ್ರೀಯ ಜಾಂಬೂರಿಯ ಯಶಸ್ಸಿಯ ಗೌರವವು ಕರ್ನಾಟಕದ ಪ್ರತಿಯೊಬ್ಬ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಸಲ್ಲುತ್ತದೆ ಎಂಬುದನ್ನು ನಾವು ಮನಗಾಣಬೇಕಾಗಿದೆ. ಈ ದಿಸೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರುಗಳು, ಕಾರ್ಯದರ್ಶಿಗಳು ಮತ್ತು ಇತರ ಪದಾಧಿಕಾರಿಗಳ ಜವಾಬ್ದಾರಿಯು ಹೆಚ್ಚೆಂದು ನಾನು ಹೇಳಬಯಸುತ್ತೇನೆ. ಹೀಗಾಗಿ ರಾಷ್ಟ್ರೀಯ ಜಾಂಬೂರಿಯನ್ನು ನಾವು ಚೆನ್ನಾಗಿ ಸಂಘಟಿಸುತ್ತೇವೆ ಮತ್ತು ಭಾರತೀಯ ಸ್ಕೌಟಿಂಗ್‌ನಲ್ಲಿ ಇದೊಂದು ಮೈಲಿಗಲ್ಲಾಗಿ ಉಳಿಯುವುದರಲ್ಲಿ ನನಗೇನೂ ಸಂಶಯವಿಲ್ಲ. ಇದಕ್ಕೆ ಸಂಬಂಧಿಸಿದಂತೆ, ದೊಡ್ಡಬಳ್ಳಾಪುರ ತರಬೇತಿ ಕೇಂದ್ರದಲ್ಲಿ ಈ ತಿಂಗಳಿನಿಂದ 3 ರಿಂದ 5ನೇ ತಾರೀಖಿನವರೆಗೆ ರಾಜ್ಯ ಸಂಘಟನಾ ಆಯುಕ್ತರುಗಳ ಸಭೆ ನಡೆಯಿತು.

ಸಾಮಾನ್ಯವಾಗಿ ವಿಶ್ವ ಜಾಂಬೂರಿಯಲ್ಲಿ ಒಂದು ದೇಶದ ಸ್ಕೌಟ್/ಗೈಡ್‌ಗಳು ಮತ್ತೊಂದು ದೇಶದ ಸ್ಕೌಟ್/ಗೈಡ್‌ಗಳೊಂದಿಗೆ ಬೆರೆಯಲು ಅವಕಾಶ ಸಿಕ್ಕುತ್ತದೆ. ಆದರೆ, ಎಲ್ಲರಿಗೂ ಈ ಅವಕಾಶ ಸಿಗುತ್ತದೆ ಎಂದು ಹೇಳಲಾಗದು. ಹಾಗಾಗಿ ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ವಿಶ್ವದಾದ್ಯಂತ ಹರಡಿರುವ ಸ್ಕೌಟ್‌ಗಳು ಯಾವುದೇ ಖರ್ಚಿಲ್ಲದೆ, ವಯೋಮಾನದ ಮಿತಿ ಇಲ್ಲದೆ, ಪರಸ್ಪರ ಸಂವಹಿಸಲು ರಚಿಸಿರುವ ವೇದಿಕೆಯೇ "JOTA JOTI" (Jamboree on The Air-Jamboree on the Internet) ಇದನ್ನು ನಾವು ಕನ್ನಡದಲ್ಲಿ "ಜಾಂಬೂರಿ ಆಕಾಶವಾಣಿ" ಮತ್ತು "ಜಾಂಬೂರಿ ಅಂತರ್ಜಾಲ" ಎಂದು ಕರೆಯಬಹುದು. ಈ ತಿಂಗಳ ಹದಿನೈದರಂದು ಹ್ಯಾಮ್ ರೇಡಿಯೋಗಳ ಮೂಲಕ ಜಾಂಬೂರಿ ಆಕಾಶವಾಣಿಯನ್ನು ಮುಖ್ಯ ಕಾರ್ಯಾಲಯ ಶಾಂತಿಗೃಹದಲ್ಲಿ ಏರ್ಪಡಿಸಲಾಗಿತ್ತು. ಬೆಂಗಳೂರು ಉತ್ತರ / ದಕ್ಷಿಣ ಮತ್ತು ಕೋಲಾರ ಜಿಲ್ಲೆಯ ಸುಮಾರು 160 ಸ್ಕೌಟ್ಸ್ / ಗೈಡ್ಸ್ / ರೋವರ್ಸ್ / ರೇಂಜರ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಕಲ್ಕತ್ತ, ಮುಂಬೈ, ಚೆನ್ನೈ, ಪಚಮಡಿ, ದೆಹಲಿ, ಚಿಕ್ಕಮಗಳೂರು ಮಾತ್ರವಲ್ಲದೆ ಜಪಾನ್, ಚೈನ, ಮಲೇಷಿಯಾ, ಶ್ರೀಲಂಕಾ ಮತ್ತು ಇತರ ರಾಷ್ಟ್ರಗಳಿಂದಲೂ ಸ್ಕೌಟ್ಸ್ /ಗೈಡ್ಸ್ / ರೋವರ್ಸ್ / ರೇಂಜರ್ಸ್‌ಗಳು ಭಾಗವಹಿಸಿದ್ದು ಹೆಮ್ಮೆಯ ವಿಷಯ. ವಿದೇಶಗಳಿಂದ ಬಂದ ಅನಿಸಿಕೆ, ಅಭಿಪ್ರಾಯಗಳನ್ನು ಕೇಳಿ ನಮ್ಮ ಮಕ್ಕಳು ಸಂತೋಷಪಟ್ಟರು. ನಾನು

ಚಾಮುಂಡಿ ಮುಕ್ತ ಘಟಕ, ಮಲ್ಲೇಶ್ವರಂ, ಬೆಂಗಳೂರು, ಇಲ್ಲಿ ಮಕ್ಕಳೊಂದಿಗೆ JOTA-JOTIಯಲ್ಲಿ ಭಾಗವಹಿಸಿದ್ದೆ.

ದಿನಾಂಕ: 25.09.2016ರಂದು 98ನೇ ರಾಜ್ಯ ಪರಿಷತ್ ಸಭೆಯು ಬೆಂಗಳೂರಿನ ಶಾಂತಿಗೃಹದಲ್ಲಿ ನಡೆಯಿತು. 2015–16ನೇ ಸಾಲಿನ ಆಯ–ವ್ಯಯ, 2016–17ನೇ ಸಾಲಿನ ಅಂದಾಜು ವೆಚ್ಚ ಮುಂತಾದ ವಿಷಯಗಳ ಬಗ್ಗೆ ಚರ್ಚೆ ಆಯಿತು. ರಾಜ್ಯ ಸಂಸ್ಥೆಯ ಅಧ್ಯಕ್ಷರ ಅನುಪಸ್ಥಿತಿಯಲ್ಲಿ ಶ್ರೀಮತಿ ಸರೋಜ ವಿ. ನಾಯ್ಡುರವರು ಅಧ್ಯಕ್ಷತೆ ವಹಿಸಿದ್ದರು.

ಕರ್ನಾಟಕದ ನಾಡಹಬ್ಬ ದಸರಾ ವೈಭವದಿಂದ ಮೈಸೂರಿನಲ್ಲಿ ನಡೆಯಿತು. ಕಾವೇರಿ ಕಣಿವೆಯಲ್ಲಿ ನೀರಿನ ಬರದಿಂದುಂಟಾಗಿರುವ ತೊಂದರೆಯ ನಡುವೆಯೂ ವಿಜಯದಶಮಿಯ ಮೆರವಣಿಗೆ ವಿಜೃಂಭಿಸಿತು. ತಿಂಗಳ ಕೊನೆಯಲ್ಲಿ ದೀಪಾವಳಿಯ ಹಬ್ಬವು ಬರಲಿದೆ. ಅಜ್ಞಾನದಿಂದ ಜ್ಞಾನದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ ನಡೆಯುವುದೇ ದೀಪಾವಳಿ. ಪರಿಸರಕ್ಕೆ ಹಾನಿಯಾಗದಂತೆ ವ್ಯಕ್ತಿ ಮತ್ತು ಸಮಾಜವು ಅರ್ಥಪೂರ್ಣವಾಗಿ ಉಜ್ವಲಿಸುವಂತೆ ಮಾಡಬೇಕಾದ್ದು ಪ್ರತಿಯೊಬ್ಬ ನಾಗರೀಕರ ಕರ್ತವ್ಯವಾಗಿದೆ. ಶಬ್ದಮಾಲಿನ್ಯ, ವಾಯುಮಾಲಿನ್ಯಗಳು ದೀಪಾವಳಿಯ ಸಂತಸವನ್ನು ಕಸಿದುಕೊಳ್ಳದಿರಲಿ. ನಮ್ಮ ಎಲ್ಲಾ ಮಕ್ಕಳು ಆನಂದದಿಂದ ಕ್ಷೇಮಕರ ದೀಪಾವಳಿಯನ್ನು ಆಚರಿಸಲಿ. ಅದರೊಡನೆ ಪರಿಸರ ರಕ್ಷಣೆಯ ರಾಯಭಾರಿಗಳಾದ ನಾವು ಇತರರಿಗೂ ಜಾಗೃತಿಯ ಸಂದೇಶವನ್ನು ತಲುಪಿಸಬೇಕು.

ನವೆಂಬರ್ ಒಂದನೆಯ ತಾರೀಖಿಗೆ ಏಕೀಕೃತ ಕರ್ನಾಟಕ ರಾಜ್ಯಕ್ಕೆ ಅರವತ್ತು ವರ್ಷಗಳ ಸಂಭ್ರಮ. ಏಕೀಕರಣದ ಹಲವಾರು ಆಶೋತ್ತರಗಳು ಇನ್ನೂ ಸಾಕಾರವಾಗಿಲ್ಲ. ಆದರೂ ಒಂದು ರಾಜ್ಯವಾಗಿ ಸಮಗ್ರ ಅಭಿವೃದ್ಧಿಯತ್ತ ನಾವು ದಾಪುಗಾಲು ಹಾಕುತ್ತಿದ್ದೇವೆ. ಕನ್ನಡ ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಕಲಾತ್ಮಕ ಸೌರಭವು ರಾಷ್ಟ್ರದಾದ್ಯಂತ ಹಬ್ಬಿದೆ. ಅಂತೆಯೇ ವೈಜ್ಞಾನಿಕವಾಗಿ, ಶೈಕ್ಷಣಿಕವಾಗಿ ನಾಗರೀಕರ ಬೆಳವಣಿಗೆಯೂ ಪೂರಕವಾಗಿ ಸಾಗಿದೆ. ಆದರೆ ನಾವು ಕ್ರಮಿಸಬೇಕಾದ ದೂರ ಸಾಕಷ್ಟಿದೆ. ಐಕ್ಯಮತ್ಯದಿಂದ ಸಾಗಿದರೆ ಖಂಡಿತ ಯಶಸ್ಸು ಎಲ್ಲರದಾಗುತ್ತದೆ. ನಿಮಗೆಲ್ಲರಿಗೂ ನಾನು ಹೃತ್ಪೂರ್ವಕವಾಗಿ ದೀಪಾವಳಿಯ ಮತ್ತು ರಾಜ್ಯೋತ್ಸವದ ಶುಭಾಶಯಗಳನ್ನು ಕೋರುತ್ತೇನೆ.

ಸ್ಕೌಟ್ಸ್–ಗೈಡ್ಸ್‌ಗಳ ಕರ್ನಾಟಕ ದರ್ಶನ ಕಾರ್ಯಕ್ರಮ ಆರಂಭವಾಗಿದೆ. ಜಿಲ್ಲೆಗಳಿಂದ ವರದಿಗಳು ಬರುತ್ತಿವೆ. ನವೆಂಬರ್ ತಿಂಗಳ ಕೊನೆಯೊಳಗೆ ಈ ಪ್ರವಾಸ ಕಾರ್ಯಕ್ರಮಗಳು ಮುಗಿಯಬೇಕು. ಸತತ ಎರಡನೇ ವರ್ಷ ಇಂತಹ ಅಪೂರ್ವ ಅವಕಾಶ ನಮ್ಮ ಮಕ್ಕಳಿಗೆ ದೊರೆತಿದೆ. ಈ ಸದವಕಾಶಕ್ಕಾಗಿ ಕರ್ನಾಟಕ ಸರ್ಕಾರಕ್ಕೆ ನಾನು ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಮುಂಬರುವ ದಿನಗಳಲ್ಲಿ ಇನ್ನೂ ಹೆಚ್ಚು ಅವಕಾಶಗಳು ನಮ್ಮ ಮಕ್ಕಳಿಗೆ ದೊರೆಯುವಂತೆ ಮನಸಾ ಪ್ರಯತ್ನಿಸುತ್ತೇನೆ.

ರಾಷ್ಟ್ರೀಯ ಜಾಂಬೂರಿ ಮತ್ತು ವಿಶೇಷ ಚಟುವಟಿಕೆಗಳ ನಡುವೆಯೂ ನಮ್ಮ ಎಂದಿನ ತರಬೇತಿ ಶಿಬಿರಗಳು, ಕಾರ್ಯಾಗಾರಗಳು ಮತ್ತು ಇನ್ನಿತರ ಚಟುವಟಿಕೆಗಳು ತಪ್ಪದೇ ನಡೆಯುತ್ತಿರುವುದು ಒಳ್ಳೆಯ ಸಂಗತಿ. ಅದಕ್ಕಾಗಿ ಸಂಬಂಧಿಸಿದ ಎಲ್ಲರನ್ನೂ ನಾನು ಅಭಿನಂದಿಸುತ್ತೇನೆ.

**"ಒಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು

## ರಾಜ್ಯಮಟ್ಟದ ಕಬ್ ಮಾಸ್ಟರ್ಸ್‌ಗಳ ಮೂಲತರಬೇತಿ ಶಿಬಿರ ಮತ್ತು ರೋವರ್ ಸ್ಕೌಟ್ ಲೀಡರ್ಸ್‌ಗಳ ಮುಂದುವರಿದ ತರಬೇತಿ ಶಿಬಿರ



ದಿನಾಂಕ 23-09-2016 ರಿಂದ 29-09-2016 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯಿಂದ ರಾಜ್ಯಮಟ್ಟದ ಕಬ್ ಮಾಸ್ಟರ್ಸ್‌ಗಳ ಮೂಲತರಬೇತಿ ಶಿಬಿರ ಮತ್ತು ರೋವರ್ ಸ್ಕೌಟ್ ಲೀಡರ್‌ಗಳ ಮುಂದುವರೆದ ತರಬೇತಿ ಶಿಬಿರಗಳನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ಏರ್ಪಡಿಸಲಾಗಿತ್ತು. ರಾಜ್ಯಾದ್ಯಂತ 15 ಶಿಬಿರಾರ್ಥಿಗಳು ಕಬ್ ಮಾಸ್ಟರ್ಸ್‌ಗಳ ಮೂಲ ತರಬೇತಿಗಾಗಿ ಹಾಜರಾಗಿದ್ದರು. ಶಿಬಿರದ ನಾಯಕಿಯಾಗಿ ಶ್ರೀಮತಿ ಸಂಧ್ಯಾರಾಣಿ, ಎಲ್.ಟಿ.(ಕಬ್) ಚಿಕ್ಕಮಗಳೂರು ಹಾಗೂ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎನ್. ಕೃಷ್ಣಮೂರ್ತಿ, ಎ.ಎಲ್.ಟಿ.(ಸಿ) ಮಂಡ್ಯ, ಶ್ರೀ ಎಸ್.ಎಸ್. ಹುಸೇನಿ, ಎ.ಎಲ್.ಟಿ.(ಸಿ) ಹುಬ್ಬಳ್ಳಿ, ಕಾರ್ಯನಿರ್ವಹಿಸಿದರು.



ರೋವರ್ ಲೀಡರ್ಸ್‌ಗಳ ಮುಂದುವರೆದ ತರಬೇತಿಯಲ್ಲಿ 28 ಶಿಬಿರಾರ್ಥಿಗಳು ಹಾಜರಾಗಿದ್ದರು. ಶ್ರೀ ಎ.ಎಂ. ಶಂಕರ್, ಎಲ್.ಟಿ.(ಆರ್) ಮತ್ತು ಎ.ಎಸ್.ಓ.ಸಿ. (ಸ್ಕೌಟ್ಸ್) ಚಿಕ್ಕಬಳ್ಳಾಪುರ ಇವರು ಶಿಬಿರದ ನಾಯಕರಾಗಿ ಸೇವೆ ಸಲ್ಲಿಸಿದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎಂ. ಗಣಪತಿ ಎ.ಎಲ್.ಟಿ.(ಆರ್) ಶಿವಮೊಗ್ಗ, ಶ್ರೀ ಎನ್. ಅಶೋಕ್ ಕುಮಾರ್, ಹೆಚ್.ಡಬ್ಲ್ಯೂ.ಬಿ.(ಆರ್) ಚಾಮರಾಜನಗರ, ಶ್ರೀ ಡ್ಯಾನಿಯಲ್ ಎಸ್.ಎಲ್. ಇವರು ಕಾರ್ಯನಿರ್ವಹಿಸಿದರು.

ದಿನಾಂಕ 23-09-2016 ರಂದು ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ಶುಭ ಹಾರೈಸುವುದರ ಮೂಲಕ ಶಿಬಿರಕ್ಕೆ ಚಾಲನೆ ನೀಡಿದರು. ಶಿಬಿರದಲ್ಲಿ ಹೊರ ಸಂಚಾರ, ಸರ್ವಧರ್ಮ ಪ್ರಾರ್ಥನೆ, ಬಿ.ಪಿ. ಸಿಕ್ಸ್ ವ್ಯಾಯಾಮಗಳು, ಶಿಬಿರಾಗ್ನಿ ಕಾರ್ಯಕ್ರಮಗಳು, ರೋವರ್ ಕ್ರ್ಯೂ ಮೀಟಿಂಗ್, ಕಬ್-ಪ್ಯಾಕ್ ಮೀಟಿಂಗ್, ವಾರ್ಷಿಕ ಯೋಜನೆ ತಯಾರಿ ಮುಂತಾದ ಚಟುವಟಿಕೆಗಳನ್ನು ಆಯೋಜಿಸಲಾಗಿತ್ತು. ದಿನಾಂಕ 28-09-2016 ರಂದು ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

## ರಾಜ್ಯಮಟ್ಟದ ಗೀತಗಾಯನ ಶಿಬಿರ ಮತ್ತು ಜಿಲ್ಲಾ ತರಬೇತಿ ಆಯುಕ್ತರ ಸಮಾವೇಶ



ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ, ಹಾಸನ ಜಿಲ್ಲಾ ಸಂಸ್ಥೆ ಮತ್ತು ಹೆಚ್.ಡಿ. ದೇವೇಗೌಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಡವಲಹಿಪ್ಪೆ, ಹೊಳೆನರಸೀಪುರ ತಾಲ್ಲೂಕು ಇವರ ಸಹಯೋಗದೊಂದಿಗೆ ದಿನಾಂಕ 16-09-2016 ರಿಂದ 18-09-2016 ರ ವರೆಗೆ ರಾಜ್ಯಮಟ್ಟದ ಗೀತಗಾಯನ ಶಿಬಿರ ಮತ್ತು ಜಿಲ್ಲಾ ತರಬೇತಿ ಆಯುಕ್ತರ ಸಮಾವೇಶವನ್ನು ಹಾಸನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಮುದಾಯ ಭವನದಲ್ಲಿ ಏರ್ಪಡಿಸಲಾಗಿತ್ತು.

ಗಾಯನ ಶಿಬಿರದಲ್ಲಿ ರಾಜ್ಯದಾದ್ಯಂತ 48 ಸ್ಕೌಟರ್‌ಗಳು, 34 ಗೈಡರ್‌ಗಳು ಹಾಜರಾಗಿದ್ದರು. ಸ್ಕೌಟ್ ವಿಭಾಗದಿಂದ ಡಾ॥ ನಾರಾಯಣ ಸ್ವಾಮಿ, ಪ್ರೀ ಎ.ಎಲ್.ಟಿ.(ಸ್ಕೌ) ಕೋಲಾರ ಇವರು ನಾಯಕರಾಗಿಯೂ, ಗೈಡ್ ವಿಭಾಗದಿಂದ ಶ್ರೀಮತಿ ಎನ್.ಕೆ. ಛಾಯಾ, ಎಲ್.ಟಿ.(ಗೈ) ರವರು ನಾಯಕಿಯಾಗಿ ಕರ್ತವ್ಯ ನಿರ್ವಹಿಸಿದರು.



ಜಿಲ್ಲಾ ತರಬೇತಿ ಆಯುಕ್ತರ ಸಮಾವೇಶದಲ್ಲಿ 21 ಸ್ಕೌಟ್ ಜಿಲ್ಲಾ ತರಬೇತಿ ಆಯುಕ್ತರುಗಳು ಮತ್ತು 112 ಗೈಡ್ ಜಿಲ್ಲಾ ತರಬೇತಿ ಆಯುಕ್ತರುಗಳು ಹಾಜರಾಗಿದ್ದರು. ಸ್ಕೌಟ್ ವಿಭಾಗದಿಂದ ಶ್ರೀ ಕೆ. ಪ್ರತಿಮ್ ಕುಮಾರ್, ಎಲ್.ಟಿ.(ಸ್ಕೌ) ಮಂಗಳೂರು ಇವರು ನಾಯಕರಾಗಿ, ಗೈಡ್ ವಿಭಾಗದಿಂದ ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ನಾಯಕಿಯಾಗಿ ಕಾರ್ಯ ನಿರ್ವಹಿಸಿದರು.

ಶ್ರೀಮತಿ ಜಾನಕಮ್ಮ, ಎ.ಡಿ.ಸಿ., ಜಿಲ್ಲಾಧಿಕಾರಿಗಳ ಕಛೇರಿ ಹಾಸನ ರವರು, ಜ್ಯೋತಿ ಬೆಳಗಿಸಿ ಶಿಬಿರ ಉದ್ಘಾಟಿಸಿ ಮಾತನಾಡುತ್ತಾ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯು ಶಿಸ್ತು, ಸೇವಾಭಾವನೆ ಮತ್ತು ದೇಶಭಕ್ತಿ ಹಾಗೂ ಆತ್ಮಸ್ಥೈರ್ಯವನ್ನು ಮಕ್ಕಳಲ್ಲಿ ಮೂಡಿಸಲು ಪ್ರಯತ್ನಪಡಿಸುತ್ತಿದ್ದು, ಈ ಸಂಸ್ಥೆಯ ಚಟುವಟಿಕೆಗಳಲ್ಲಿ ಎಲ್ಲ ಶಿಕ್ಷಕರು, ಶಿಕ್ಷಕಿಯರು ತೊಡಗಿಸಿಕೊಂಡು, ಸಂಸ್ಥೆಯ ಬೆಳವಣಿಗೆ ಪ್ರೋತ್ಸಾಹಿಸಬೇಕೆಂದು ಕರೆ ನೀಡಿದರು.

ಸಮಾರಂಭದಲ್ಲಿ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಜಯರಮೇಶ್, ಜಿಲ್ಲಾ ಆಯುಕ್ತರು (ಗೈಡ್ಸ್), ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ಉಪಸ್ಥಿತರಿದ್ದರು.

ದಿನಾಂಕ 18–09–2016 ರಂದು ಬೆಳಗ್ಗೆ ಸರ್ವಧರ್ಮಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು. ಶಿಬಿರಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಭೇಟಿ ನೀಡಿ ಮಾತನಾಡುತ್ತ ಸ್ಕೌಟಿಂಗ್–ಗೈಡಿಂಗ್ ಚಟುವಟಿಕೆಗಳು ಉತ್ತಮವಾಗಿ ನಡೆಯುತ್ತಿದ್ದು ಈ ವರ್ಷದಲ್ಲಿ ದಿವಂಗತ ವಿ.ಪಿ. ದೀನದಯಾಳು ನಾಯ್ಡು ರವರ ಜನ್ಮ ಶತಮಾನೋತ್ಸವ ಅಂಗವಾಗಿ ರಾಜ್ಯದೆಲ್ಲಡೆ ಸ್ಕೌಟ್ಸ್–ಗೈಡ್ಸ್ ಚಟುವಟಿಕೆಗಳನ್ನು ಹಮ್ಮಿಕೊಂಡು ಆಚರಿಸಲಾಗುತ್ತಿದೆ ಎಂದು ತಿಳಿಸಿದರು ಹಾಗು ಶಿಬಿರಾರ್ಥಿಗಳೊಂದಿಗೆ ಮುಕ್ತ ಸಂವಾದಮಾಡಿ ಸ್ಕೌಟರ್ಸ್–ಗೈಡರ್ಸ್‌ಗಳ ಸಮಸ್ಯೆಗಳ ಕುರಿತು ಚರ್ಚಿಸಿದರು.

ಸಮಾರಂಭದಲ್ಲಿ ಶ್ರೀ ಕೃಷ್ಣೇಗೌಡ, ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಶ್ರೀ ಜಿ.ಡಿ. ನಾರಾಯಣ್, ಹೆಚ್.ಡಿ. ದೇವೇಗೌಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಪ್ರಾಂಶುಪಾಲರು ಮತ್ತು ಎ.ಡಿ.ಸಿ.(ಸ್ಕೌ), ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ(ಗೈ), ಶ್ರೀಮತಿ ಬಿ.ಡಿ. ಶಾಂತ, ಶ್ರೀಮತಿ ಎನ್.ಕೆ. ಛಾಯಾ ಶ್ರೀ ನಾರಾಯಣಸ್ವಾಮಿ, ಶ್ರೀ ಸುರೇಶ್ ಗುರೂಜಿ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್–ಗೈಡ್ಸ್, ಹಾಸನ ಶ್ರೀ ಎಂ. ಪ್ರಭಾಕರ್ ಭಟ್, ಎಸ್.ಓ.ಸಿ(ಎಸ್) ಶ್ರೀ ಹೆಚ್.ಎಂ. ಗೌಡಯ್ಯ, ಜಿಲ್ಲಾ ಸ್ಥಾನಿಕ ಆಯುಕ್ತರು(ಸ್ಕೌ) ಮುಂತಾದವರು ಉಪಸ್ಥಿತರಿದ್ದರು.

**ತಿದ್ದುಪಡಿ**

**ಆಗಸ್ಟ್ 2016ರ ಸಂಚಿಕೆಯ ಪುಟ 15ರಲ್ಲಿ "ಅಗ್ರಗಾಮಿತ್ವ ಅಂದಾಜಿಸುವಿಕೆ" ಶಿಬಿರದ ನಾಯಕ ಶ್ರೀ ಆನಂದ ಅಡಿಗ, ಎಲ್.ಟಿ(ಎಸ್) ಎಂದಿರಬೇಕಿತ್ತು.**

**– ಸಂಪಾದಕರು**

# 98ನೇ ರಾಜ್ಯ ಪರಿಷತ್ ಸಭೆ

ದಿನಾಂಕ 25.09.2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ 98ನೇ ರಾಜ್ಯ ಪರಿಷತ್ ಸಭೆಯು ಶಾಂತಿಗೃಹ ಆವರಣದಲ್ಲಿರುವ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ನೆರವೇರಿತು. ರಾಜ್ಯ ಸಂಸ್ಥೆಯ ಅಧ್ಯಕ್ಷರು ಹಾಗೂ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ಅವರ ಅನುಪಸ್ಥಿತಿಯಲ್ಲಿ ಹಿರಿಯ ಉಪಾಧ್ಯಕ್ಷರಾದ ಶ್ರೀಮತಿ ಸರೋಜ ವಿ. ನಾಯ್ಡುರವರು ಅಧ್ಯಕ್ಷತೆ ವಹಿಸಿ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು. 2015-16 ರ ವರದಿ ಆಯವ್ಯಯ, ತೀರ್ಮಾನಗಳ ಬಗ್ಗೆ ತೆಗೆದುಕೊಂಡ ಕ್ರಮಗಳನ್ನು ಮಂಡಿಸಿ ಅನುಮೋದನೆ ಪಡೆಯಲಾಯಿತು. ಹಾಗೆಯೇ 2016-17ನೇ ಸಾಲಿನ ಕಾರ್ಯಕ್ರಮಗಳು, ಅಂದಾಜು ವೆಚ್ಚ ಮುಂತಾದ ವಿಷಯಗಳ ಬಗ್ಗೆ ಚರ್ಚೆ ನಡೆದು ಅನುಮೋದನೆ ಪಡೆಯಲಾಯಿತು.





ಮೈಸೂರಿನಲ್ಲಿ ನಡೆಯಲಿರುವ 17ನೇ ರಾಷ್ಟ್ರೀಯ ಜಾಂಬೂರಿಯ ಬಗ್ಗೆ ವಿವರವಾಗಿ ಚರ್ಚಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾತನಾಡುತ್ತಾ ರಾಜ್ಯದ ಸ್ಕೌಟಿಂಗ್-ಗೈಡಿಂಗ್ ಬೆಳವಣಿಗೆಗೆ ಸಹಕಾರ ನೀಡುತ್ತಿರುವ ಎಲ್ಲರಿಗೂ ಧನ್ಯವಾದ ತಿಳಿಸಿದರು ಹಾಗೂ ಮುಂಬರುವ ಜಾಂಬೂರಿಯಲ್ಲಿ ಎಲ್ಲರೂ ಸಕ್ರಿಯವಾಗಿ ಪಾಲ್ಗೊಂಡು ಯಶಸ್ವಿಗೊಳಿಸಲು ಕರೆ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಸರೋಜ ವಿ.ನಾಯ್ಡು ಅವರು ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಉತ್ತಮ ಸೇವಾ ಸಂಸ್ಥೆಯಾಗಿದ್ದು, ಇದರ ಬೆಳವಣಿಗೆಗೆ ಎಲ್ಲರ ಸಹಕಾರ ಅವಶ್ಯಕ ಎಂದು ತಿಳಿಸಿದರು.






ಉತ್ತಮ ಸೇವೆಗಾಗಿ ವಿಶ್ವಗೈಡ್ ಸಂಸ್ಥೆಯ ಏಷ್ಯಾ ಪೆಸಿಫಿಕ್ ವಲಯದ ಪ್ರಶಸ್ತಿಗೆ ಭಾಜನರಾದ ಶ್ರೀಮತಿ ಪಿ.ಸರೋಜ, ಜಿಲ್ಲಾ ಮುಖ್ಯ ಆಯುಕ್ತರು(ಗೈ) ಬೆಂಗಳೂರು ಉತ್ತರ ಜಿಲ್ಲೆ, ಮಾಜಿ ನಿರ್ದೇಶಕರು, ರಾಷ್ಟ್ರೀಯ ಸಂಸ್ಥೆ ಇವರನ್ನು ರಾಜ್ಯ ಸಂಸ್ಥೆಯಿಂದ ಸನ್ಮಾನಿಸಲಾಯಿತು.

ಏಷ್ಯಾ ಪೆಸಿಫಿಕ್ ವಲಯದ ಯುವ ಸಮಿತಿಗೆ ಚುನಾಯಿತರಾಗಿರುವ ಕು. ಮೇಘನಾ ಎನ್. ಬೆಳವಾಡಿ, ಅಧ್ಯಕ್ಷರು, ರಾಜ್ಯ ಹಾಗೂ ರಾಷ್ಟ್ರೀಯ ಯುವಸಮಿತಿ ಇವರನ್ನು ರಾಜ್ಯ ಸಂಸ್ಥೆಯಿಂದ ಸನ್ಮಾನಿಸಲಾಯಿತು.





ರೋವರ್ ವಿಭಾಗದಲ್ಲಿ ಲೀಡರ್ ಟ್ರೈನರ್ ತರಬೇತಿ ಪೂರೈಸಿದ ಶ್ರೀ.ಎ.ಎನ್.ನರೇಂದ್ರ ಕುಮಾರ್, ಸ್ಕೌಟ್ ವಿಭಾಗದಲ್ಲಿ ಲೀಡರ್ ಟ್ರೈನರ್ ತರಬೇತಿ ಪೂರೈಸಿದ ಶ್ರೀ ಟಿ.ಸಿ. ಗಂಗಾಧರಯ್ಯ, ಗೈಡ್ ವಿಭಾಗದಲ್ಲಿ ಲೀಡರ್ ಟ್ರೈನರ್ ತರಬೇತಿ ಪೂರೈಸಿದ ಶ್ರೀಮತಿ ಅಜೀಜಾ ಸುಲ್ತಾನ, ಶ್ರೀಮತಿ ಬದ್ಮಜ ಇವರುಗಳಿಗೆ ಗೌರವ ಪ್ರಭಾರ ನೀಡಲಾಯಿತು.

ಪ್ರಾರಂಭದಲ್ಲಿ ಶ್ರೀ ಚಿನ್ನಸ್ವಾಮಿರೆಡ್ಡಿ, ರಾಜ್ಯ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು(ಗೈಡ್ಸ್) ವಂದನಾರ್ಪಣೆ ಮಾಡಿದರು. ಶ್ರೀಮತಿ ಸಿ. ಮಂಜುಳಾ, ರಾ.ಸಂ.ಆ(ಗೈ) ಕಾರ್ಯಕ್ರಮ ನಿರೂಪಿಸಿದರು. 2015-16ನೇ ಸಾಲಿನ ರಾಜ್ಯ ಹಾಗೂ ವಿಭಾಗ ಮಟ್ಟದ ಪ್ರಶಸ್ತಿಗಳನ್ನು ಕೆಳಕಂಡ ಜಿಲ್ಲಾ ಸಂಸ್ಥೆಗಳಿಗೆ ವಿತರಿಸಲಾಯಿತು.

## ರಾಜ್ಯ ಮಟ್ಟದ ಪ್ರಶಸ್ತಿಗಳು

ಪ್ರಥಮ ಸ್ಥಾನ



ಅಬ್ದುಲ್ ಗಫಾರ್
ಪರ್ಯಾಯ ಫಲಕ
ದಕ್ಷಿಣ ಕನ್ನಡ ಜಿಲ್ಲೆ

ದ್ವಿತೀಯ ಸ್ಥಾನ



ಜಸ್ಟೀಸ್ ಕೆ. ಶಂಕರನಾರಾಯಣರಾವ್
ಪರ್ಯಾಯ ಫಲಕ
ದಾವಣಗೆರೆ ಜಿಲ್ಲೆ

ತೃತೀಯ ಸ್ಥಾನ



ಮೇಜರ್ ವೈ.ವಿ.ಕೆ. ಮೂರ್ತಿ
ಪರ್ಯಾಯ ಫಲಕ
ಉಡುಪಿ ಜಿಲ್ಲೆ

## ವಿಭಾಗ ಮಟ್ಟದ ಪ್ರಶಸ್ತಿಗಳು

### ಬೆಂಗಳೂರು ವಿಭಾಗ

ಪ್ರಥಮ ಸ್ಥಾನ



ವಿ.ಪಿ.ದೀನದಯಾಳು ನಾಯ್ಡು
ಪರ್ಯಾಯ ಫಲಕ
ಬೆಂಗಳೂರು ಉತ್ತರ ಜಿಲ್ಲೆ

ದ್ವಿತೀಯ ಸ್ಥಾನ



ಕೋಲಾರ ಜಿಲ್ಲೆ

ತೃತೀಯ ಸ್ಥಾನ



ಬೆಂಗಳೂರು ದಕ್ಷಿಣ ಜಿಲ್ಲೆ

### ಮೈಸೂರು ವಿಭಾಗ

ಪ್ರಥಮ ಸ್ಥಾನ



ಜೆ.ಬಿ. ಮಲ್ಲಾರಾಧ್ಯ
ಪರ್ಯಾಯ ಫಲಕ
ಹಾಸನ ಜಿಲ್ಲೆ

ದ್ವಿತೀಯ ಸ್ಥಾನ



ಮೈಸೂರು ಜಿಲ್ಲೆ

ತೃತೀಯ ಸ್ಥಾನ



ಮಂಡ್ಯ ಜಿಲ್ಲೆ

## ಬೆಳಗಾವಿ ವಿಭಾಗ

ಪ್ರಥಮ ಸ್ಥಾನ



ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ
ಬೆಳಗಾವಿ ಜಿಲ್ಲೆ

ದ್ವಿತೀಯ ಸ್ಥಾನ



ಧಾರವಾಡ ಜಿಲ್ಲೆ

ತೃತೀಯ ಸ್ಥಾನ




ಹಾವೇರಿ ಜಿಲ್ಲೆ

## ಕಲಬುರಗಿ ವಿಭಾಗ

ಪ್ರಥಮ ಸ್ಥಾನ



ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ
ರಾಯಚೂರು ಜಿಲ್ಲೆ

ದ್ವಿತೀಯ ಸ್ಥಾನ



ಬಳ್ಳಾರಿ ಜಿಲ್ಲೆ

ತೃತೀಯ ಸ್ಥಾನ



ಬೀದರ್ ಜಿಲ್ಲೆ

# ಜಾಂಬೂರಿ

ಬಂತು, ಬಂತು ಮಕ್ಕಳಿಗೆ ಕರ್ನಾಟಕ ದರ್ಶನ ಬಂತು
ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಲ್ಲಿ ಹರುಷ ತಂತು
ಆಯೋಜನೆ ಮಾಡಿದ ತಮಗೆಲ್ಲರಿಗೂ
ಕೋಟಿ-ಕೋಟಿ ನಮನ ಅರ್ಪಿತ

ಬಂತು, ಬಂತು 17ನೇ ರಾಷ್ಟ್ರೀಯ ಜಾಂಬೂರಿ ಬಂತು
ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮನೆ ಮಾತಾಯಿತು
ಸಂಸ್ಕೃತಿನಗರ ಮೈಸೂರಿಗೆ ಜಾಂಬೂರಿ ಪೇಟವ ಧರಿಸಿತು
ಜಾಂಬೂರಿಯಲ್ಲಿ ಭಾಗವಹಿಸಲು ಯೋಗ ಬಂತು

ಜೊತೆ-ಜೊತೆಯಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗೆ
100 ವರ್ಷ ತುಂಬಿ ಬಂತು
ಮೈಸೂರಲ್ಲಿ ಹಬ್ಬದ ವಾತಾವಣರ ಚಲ್ಲಿಯೇ ಬಿಟ್ಟಿತು
ಮೈಸೂರ ತುಂಬೆಲ್ಲಾ ಚಿಲಿ-ಪಿಲಿ ಹಕ್ಕಿಗಳ ಗರಿ ಗೆದರಿತು.

ಜಾಂಬೂರಿ ಸವಾರಿ ನೋಡಲು ದೇಶದ
ಎಲ್ಲ ರಾಜ್ಯಗಳಿಗೆ ಯೋಗ ಬಂತು
ವಿವಿಧ ಚಟುವಟಿಕೆಯಲ್ಲಿ ಭಾಗವಹಿಸುವ ಅವಕಾಶ ಬಂತು
ಶಿಸ್ತು, ಸಂಯಮ, ದೇಶಾಭಿಮಾನ ಮೂಡಿಸುವ ಸಂಕಲ್ಪ ಬಂತು
ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಮಹತ್ವ ಬಂತು.

ಜಾಂಬೂರಿಯಲ್ಲಿ ಭಾಗವಹಿಸಲು
ಎಲ್ಲರಿಗು ಹೊಸತನ ತಂತು
ಹೊಸ ವರ್ಷಕ್ಕೆ ಹೊಸ ದಾಖಲೆ ಮಾಡುವ ಛಲ ಬಂತು
ಹೊಷ ವರ್ಷದ ಶುಭಾಶಯ
ಹೇಳುವ ಬಾಕಿ ಒಂದುಳಿಯಿತು.

– ಕು. ಮೀನಾಜ ಫಾತಿಮಾ ಅ. ಸೂರಣಗಿ
(ಗೈಡ್), ಸೇಂಟ್ ಆನ್ಸ್ ಪ್ರೌಢಶಾಲೆ, ಹಾವೇರಿ

## ವಿಭಾಗ ಮಟ್ಟದ ರೇಂಜರ್ಸ್‌ಗಳ ಕಾರ್ಯಾಗಾರ (ಪ್ರೇರಣಾ)




ದಿನಾಂಕ 29-09-2016 ರಿಂದ 03-10-2016 ರವರೆಗೆ ರವರೆಗೆ ವಿಭಾಗಮಟ್ಟದ ರೇಂಜರ್ಸ್‌ಗಳ "ಪ್ರೇರಣಾ ತರಬೇತಿ ಶಿಬಿರ"ವನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಹಾಗೂ ಜಿಲ್ಲಾ ಸಂಸ್ಥೆ, ರಾಯಚೂರು ಮತ್ತು ಸ್ಥಳೀಯ ಸಂಸ್ಥೆ, ಸಿಂದನೂರು, ಇವರುಗಳ ಸಂಯುಕ್ತಾಶ್ರಯದಲ್ಲಿ ದಿ॥ ವಿ.ಪಿ. ದೀನದಯಾಳು ನಾಯ್ಡುರವರ ಜನ್ಮ ಶತಮಾನೋತ್ಸವ ಸ್ಮರಣಾರ್ಥವಾಗಿ ಮಾಂಟೇಸ್ಸರಿ ಪಬ್ಲಿಕ್ ಶಾಲೆ ಸಿಂಧನೂರಿನಲ್ಲಿ ಹಮ್ಮಿಕೊಳ್ಳಲಾಯಿತು.

ದಿನಾಂಕ 29-09-2016 ರಂದು ಗುರುವಾರ ಮಧ್ಯಾಹ್ನ 3.00 ಗಂಟೆಗೆ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ದೇಶದಲ್ಲಿ ವಿದ್ಯಾರ್ಥಿ, ಯುವಜನತೆಯನ್ನು ತರಬೇತುಗೊಳಿಸುವಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ತನ್ನದೆ ಆದ ಉತ್ತಮ ಸೇವೆಯನ್ನು ಸಲ್ಲಿಸುತ್ತಿದೆ. ಮಹಿಳಾ ಸಮುದಾಯ ಇಂದು ವಿಶ್ವಶಾಂತಿ, ವಿಶ್ವ ಕುಟುಂಬ, ಪ್ರಕೃತಿ ಮತ್ತು ಸಮಾಜದ ಸಂರಕ್ಷಣೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಿದೆ ಎಂದು ಗೈಡ್ಸ್‌ನ ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀಮತಿ ಎಸ್.ಕೆ. ಪ್ರಭಾರವರು ಶಿಬಿರವನ್ನು ಉದ್ಘಾಟಿಸಿ ಮಾತನಾಡಿದರು.

ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಮಾತನಾಡಿ, ಸಾಧನೆ ಮಾಡಲು ಕಷ್ಟಗಳೆಂಬ ಮೆಟ್ಟಿಲುಗಳು ಅವಶ್ಯಕ. ಆ ಮೆಟ್ಟಿಲು ನೀವಾಗಬೇಕು. ಕಷ್ಟಗಳನ್ನು ಎದುರಿಸಿ ಮಹಿಳೆಯರು ತಮ್ಮ ದೌರ್ಬಲ್ಯಗಳನ್ನು ಮರೆತು ಸಮರ್ಥ ಜೀವನವನ್ನು ನಡೆಸುವ ನಿಟ್ಟಿನಲ್ಲಿ ಬದುಕಬೇಕು ಎಂದು ಹೇಳಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸ್ಥಳೀಯ ಅಧ್ಯಕ್ಷರು ಹಾಗೂ ನಗರ ಯೋಜನಾ ಪ್ರಾಧಿಕಾರದ ಶ್ರೀ ಎಸ್. ಶರಣೇಗೌಡ ಮಾತನಾಡಿ, ಪ್ರೇರಣಾ ಕಾರ್ಯಕ್ರಮದಲ್ಲಿ ನಡೆಯುವ ರಸಪ್ರಶ್ನೆ, ಗುಂಪು ಚರ್ಚೆ, ಸಂಭಾಷಣೆ, ಯುವಧ್ವನಿ ಹಾಗೂ ವೀರಮಹಿಳೆಯರ ಸಾರ್ಥಕ ಬದುಕಿನ ಜೀವನ ಚರಿತ್ರೆಯನ್ನು ಅರಿತುಕೊಂಡು ನಿಮ್ಮ ಜೀವನದಲ್ಲಿ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕು ಎಂದರು. ತಾಲೂಕು ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಬಸಮ್ಮ ಬಸನಗೌಡ ಕಾರ್ಯಕ್ರಮ ಉದ್ಘಾಟಿಸಿದರು. ವೇದಿಕೆಯ ಮೇಲೆ ತರಬೇತಿ ಸಂಯೋಜಕಿ ಶ್ರೀಮತಿ ಅಲಿಯ ಖಾನಂ, ಶ್ರೀಮತಿ ಅಜೀಜಾ ಸುಲ್ತಾನ, ಮಾಂಟೇಸ್ಸರಿ ಪಬ್ಲಿಕ್ ಶಾಲೆಯ ಮುಖ್ಯಸ್ಥೆ ಶ್ರೀಮತಿ ಕೆ.ಆರ್. ಜ್ಯೋತಿ, ಕಾರ್ಯದರ್ಶಿ ಶ್ರೀ ಹನುಮಂತಪ್ಪ ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀ ರಾಮದಾಸ ಸ್ವಾಗತಿಸಿದರು. ಕು. ಶಾಹೀನ್ ಬೇಗಂ ವಂದಿಸಿದರು. ಶ್ರೀ ವಿಶ್ವನಾಥಗೌಡ, ಜಿಲ್ಲಾ ಸಂಘಟಕರು ನಿರೂಪಿಸಿದರು.

ದಿನಾಂಕ 29-09-2016 ರಂದು ಶ್ರೀಮತಿ ಶಿಲಾಕುಮಾರಿ ದಾಸ್, ಉಪನ್ಯಾಸಕರು, ಎಲ್.ವಿ.ಡಿ. ಕಾಲೇಜು ರಾಯಚೂರು ಇವರು ಮಹಿಳಾ ಸಬಲೀಕರಣ ವಿಷಯದ ಬಗ್ಗೆ ಉಪನ್ಯಾಸವನ್ನು ಮಾಡಿದರು.

ದಿನಾಂಕ 30-09-2016 ರಂದು ಶ್ರೀಮತಿ ಶರಣಮ್ಮ ಅಂಬರೇಶಪ್ಪ ಹೂನೂರು, ಅಧ್ಯಕ್ಷರು, ಜಿಲ್ಲಾ ಸ್ತ್ರೀಶಕ್ತಿ ಒಕ್ಕೂಟ, ರಾಯಚೂರು ಇವರು ಮಹಿಳೆ ಮತ್ತು ಉದ್ದಿಮೆ ವಿಷಯದ ಬಗ್ಗೆ ಉಪನ್ಯಾಸವನ್ನು ಮಂಡಿಸಿದರು. ಮತ್ತೋರ್ವ ಉಪನ್ಯಾಸಕಿ ಡಾ॥ ಸಾವಿತ್ರಿ ಪಾಟೀಲ್, ಗೈಡ್ ಕ್ಯಾಪ್ಟನ್, ಸ.ಪ.ಪೂ. ಕಾಲೇಜು, ನಾಗಠಾಣ, ವಿಜಯಪುರ ಜಿಲ್ಲೆ ಇವರು ಯೋಗ ಮತ್ತು ಆರೋಗ್ಯದ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಮತಿ ಸವಿತಾ ಅಣ್ಣೆಪ್ಪನವರ, ಸೈಕ್ಲಿಸ್ಟ್, ಏಕಲವ್ಯ ಪ್ರಶಸ್ತಿ ವಿಜೇತರು, ವಿಜಯಪುರ ಇವರು ಮಹಿಳೆ ಮತ್ತು ಕ್ರೀಡೆ ಎನ್ನುವ ವಿಷಯದ ಬಗ್ಗೆ ತಿಳಿಸಿದರು.

ದಿನಾಂಕ 01-10-2016 ರಂದು ಡಾ॥ ಜಾಗೃತಿ ಬಿ. ದೇಶಮಾನ, ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು ಅರ್ಥಶಾಸ್ತ್ರ ವಿಭಾಗ, ಕೃಷಿ ವಿಶ್ವವಿದ್ಯಾಲಯ, ರಾಯಚೂರು ಇವರು ಶೂನ್ಯದಿಂದ ಸಾಧನೆ ವಿಷಯದ ಬಗ್ಗೆ ಮಾತನಾಡಿದರು. ಶ್ರೀಮತಿ ಆರ್. ಇಂದಿರಾ, ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಇವರು ಶಿಕ್ಷಣದಲ್ಲಿ ಸಾಧನೆ ವಿಷಯದ ಬಗ್ಗೆ ಉಪನ್ಯಾಸ ನೀಡಿದರು.

ದಿನಾಂಕ 02-10-2016 ರಂದು ಸರ್ವಧರ್ಮ ಪ್ರಾರ್ಥನೆ ಮೂಲಕ ಗಾಂಧಿಜಯಂತಿ ಆಚರಿಸಲಾಯಿತು. ನಂತರ ಶ್ರೀಮತಿ ಮಂಜುಳಾ ಪಾಟೀಲ್, ಅಧ್ಯಕ್ಷರು, ನಗರಸಭೆ, ಸಿಂಧನೂರು ಇವರು ಸಹಕಾರ ಕ್ಷೇತ್ರದಲ್ಲಿ ಸಾಧನೆ ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಮತಿ ಅನ್ನಪೂರ್ಣಮ್ಮ ಸಾವಯವ ಕೃಷಿಕರು, ಮುಳ್ಳೂರು ತಾ॥ ಸಿಂಧನೂರು ಇವರು ಕೃಷಿಯಲ್ಲಿ ಮಹಿಳೆಯರ ಸಾದನೆ ಎಂಬ ವಿಷಯದ ಬಗ್ಗೆ ತಿಳಿಸಿದರು. ಬ್ರಹ್ಮಕುಮಾರಿ ಪಾರ್ವತಿ ಅಕ್ಕ, ಸಂಚಾಲಕರು, ಈಶ್ವರೀಯ ವಿಶ್ವವಿದ್ಯಾಲಯ, ಸಿಂಧನೂರು ಇವರು ಮಹಿಳೆಯರ ವ್ಯಕ್ತಿತ್ವ ವಿಕಸನದ ಬಗ್ಗೆ ಉಪನ್ಯಾಸ ನೀಡಿದರು.

ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿ ಮಾತನಾಡಿದ ಶ್ರೀ ಹಂಪನಗೌಡ ಬಾದರ್ಲಿ, ಮಾನ್ಯ ಶಾಸಕರು, ಸಿಂಧನೂರು ಇವರ ಸ್ಕೌಟ್ಸ್-ಗೈಡ್ಸ್ ಚಳವಳಿಯು ಸುಮಾರು ವರ್ಷಗಳಿಂದ ಪ್ರಾರಂಭವಾಗಿದ್ದು, ಇಂದು ಭವ್ಯ ಭಾರತದ ಉತ್ತಮ ನಾಗರಿಕ ಸಮಾಜವನ್ನು ನಿರ್ಮಾಣ ಮಾಡುವಲ್ಲಿ ಯುವಕ-ಯುವತಿಯರಿಗೆ ಈ ಚಳವಳಿಯು ಮೌಲ್ಯಾದರ್ಶಗಳನ್ನು ತುಂಬುತ್ತಾ ಯಶಸ್ಸಿನೆಡೆಗೆ ಸಾಗುತ್ತಿದೆ ಎಂದು ತಿಳಿಸಿದರು. ಶ್ರೀರಾಮದಾಸ ನಿರೂಪಿಸಿದರು. ಶ್ರೀ ವಿಶ್ವನಾಥ ಗೌಡ ಬಿ. ಮರ್ಚೇಡ್ ವಂದಿಸಿದರು.

## ಜೋಟಾ-ಜೋಟಿ ಕಾರ್ಯಕ್ರಮ

ದಿನಾಂಕ 15-10-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆ ವತಿಯಿಂದ ಬೆಳಿಗ್ಗೆ 8 ಗಂಟೆಯಿಂದ ಸಂಜೆ 5 ಗಂಟೆಯವರೆಗೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹದಲ್ಲಿ ಜೋಟಾ-ಜೋಟಿ ಕಾರ್ಯಕ್ರಮ ನೆರವೇರಿತು. ಬೆಂಗಳೂರು ಅಮೆಚೂರ್ ರೇಡಿಯೋ ಕ್ಲಬ್ ಇವರು ಅಂತರ್ಜಾಲ ಕೇಂದ್ರವನ್ನು ವ್ಯವಸ್ಥೆ ಗೊಳಿಸಿದ್ದರು. ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವು ಪ್ರಾರಂಭವಾಗಿ ಶ್ರೀ ರಾಮಮೋಹನ್, ಅಧ್ಯಕ್ಷರು, ಬೆಂಗಳೂರು ಅಮೆಚೂರ್ ರೇಡಿಯೋ ಕ್ಲಬ್, ಬೆಂಗಳೂರು ಇವರು ಪಶ್ಚಿಮ ಬಂಗಾಳದ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಮಾತನಾಡುವುದರ ಮೂಲಕ ಕಾರ್ಯಕ್ರಮ ಉದ್ಘಾಟಿಸಿದರು.



160 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು (ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ ಮತ್ತು ಕೋಲಾರ) ಜೋಟಾ-ಜೋಟಿ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಕೋಲ್ಕತ್ತಾ, ಮುಂಬೈ, ಚೆನ್ನೈ, ಪಚಮಡಿ, ದೆಹಲಿ, ಮಗಳೂರು ಮುಂತಾದ ಸ್ಥಳಗಳ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಸ್ಕೌಟಿಂಗ್-ಗೈಡಿಂಗ್ ಅನುಭವವನ್ನು ರಾಜ್ಯಪುರಸ್ಕಾರ ಮತ್ತು ರಾಷ್ಟ್ರಪತಿ ಪರೀಕ್ಷೆಯ ಬಗ್ಗೆ ವಿಷಯಗಳನ್ನು ಹಂಚಿಕೊಂಡರು. ಜಪಾನ್, ಚೈನಾ, ಮಲೇಶಿಯಾ, ಶ್ರೀಲಂಕಾ, ರಾಷ್ಟ್ರಗಳ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಸಹ ರೋವರ್ಸ್-ರೇಂಜರ್ಸ್ ಅನಿಸಿಕೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ಮಧ್ಯಾಹ್ನದ ಅವಧಿಯಲ್ಲಿ HAM ರೇಡಿಯೋ ಬಗ್ಗೆ P.P.T. ತೋರಿಸಲಾಯಿತು. ರೇಡಿಯೋ ತರಂಗ, ಸಿಗ್ನಲ್ ಹಾಗು ಸಿದ್ಧತೆಯ ಬಗ್ಗೆ ಪ್ರಾತ್ಯಕ್ಷಿಕೆ ತೋರಿಸಲಾಯಿತು. ಶ್ರೀ ಬಿ.ಎ. ಸುಬ್ರಮಣಿ ಎಂಜಿನಿಯರ್, ಇಸ್ರೋ ಸೆಟಲೈಟ್ ಸೆಂಟರ್, ಬೆಂಗಳೂರು ಇವರು ಉಪಗ್ರಹ ಉಡಾವಣೆ, ಅದರ ಭಾಗಗಳು, ಕೆಲಸದ ವೈಖರಿ, ಉಪಗ್ರಹ ಜೀವಾವಧಿ ಮುಂತಾದ ವಿಷಯಗಳ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮಾಹಿತಿ ನೀಡಿದರು.

ಶ್ರೀ ವಿ. ರಮೇಶ್ ಖಜಾಂಚಿ, ಬೆಂಗಳೂರು ಅಮೆಚೂರ್ ರೇಡಿಯೋ ಕ್ಲಬ್, ಶ್ರೀ ಆರ್. ಮಂಜುನಾಥ, ಶ್ರೀ ಸತ್ಯಪಾಲ, ಶ್ರೀ ಕೆ.ಎನ್. ಪ್ರಕಾಶ್, ಶ್ರೀ ಎಸ್. ಸೋಮಶೇಖರ್ ಇವರುಗಳು ಕಾರ್ಯಕ್ರಮಕ್ಕೆ ಸಹಕಾರ ನೀಡಿದರು. ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ), ಶ್ರೀಮತಿ ಬಿ. ರೇವತಿ, ಸಹಾಯಕ ರಾಜ್ಯ ಆಯುಕ್ತರು, ಶ್ರೀಮತಿ ರಾಧಾ ವೆಂಕಟೇಶ್, ಸಹಾಯಕ ರಾಜ್ಯ ಆಯುಕ್ತರು ಭಾಗವಹಿಸಿ ಸ್ಕೌಟ್-ಗೈಡ್‌ಗಳಿಗೆ ಶುಭ ಕೋರಿದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌ) ಕಾರ್ಯಕ್ರಮದ ಉಸ್ತುವಾರಿ ವಹಿಸಿದ್ದರು.

# NATIONAL LEVEL STATE ORGANISING COMMISSIONER'S MEET



In Connection with the 17th National Jamboree, National Level State Organising Commissioner's Meet was held from 03 to 05 October 2016 at Dr. Annie Besant Scouts and Guides State Training and Camping Centre, Dodaballapur, Bengaluru Rural District.

The Birth Centenary Celebration of late V.P. Deenadayalu Naidu, former National Commissioner, The Bharat Scouts and Guides, India was observed on 3rd October 2016. Sri M.A. Chellaiah, Co-ordinator of the meet briefed about the Life & Achievements of V.P. Deenadayalu Naidu. Sri B.I. Nagarale, Chief National Commissioner and Sri P.G.R. Sindhia, State Chief Commissioner paid floral tribute to the photo of V.P. Deenadayalu Naidu.



A Colorful Booklet on V.P. Deenadayalu Naidu and a Book in English about the life & achievements of Kondajji Basappa was presented to all the participants.

34 State Organising Commissioners(S) and 22 State Organising Commissioner(G) from 34 States participated in the meet. The Assistant State Organising Commissioners, District Organising Commissioners and District Organisers of the Karnataka State also participated in the meet. Sri M.A. Khalid, International Commissioner(Scouts) Inaugurated the meet and addressed the participants. Sri. K.Sukumara, Director, NHQ addressed the participants and briefed about the Jamboree. Smt. Geetha Nataraj, State Commissioner(Guides), Sri. R. Krishnaswamy, Joint Director(S), Miss Suman Latha, Joint Director(G), Smt Surekha Srivatsa, I/C Joint Director (SS), Sri Amar Chettri, Deputy Director (BP) and Sri Arun Chandra Pattar, Assistant Director (SR) were present.

All the participants along with the Staff Members visited the Jamboree Site at Adakanahalli and District Headquarters of Mysuru on 4.10.2016. Sri. P. Vishwanath, Secretary General of the Jamboree and Sri. Chinnaswamy Reddy, State Secretary briefed them about the Jamboree. All the District Office Bearers were also present.

Sri.B.I. Nagarale, Chief National Commissioner delivered the valedictory address. In his address he appealed to the SOC's to attend the 17th National Jamboree along with their State Contingents for the Success of the Jamboree. He thanked the Karnataka State, which has accepted to host the 17th National Jamboree at Mysuru under the Leadership of the Hon'ble Chief Minister of Karnataka.

Sri P.G.R. Sindhia, State Chief Commissioner and also the 'ARCHITECT' of the 17th National Jamboree spoke about the Contribution of Late Kondajji Basappa and late V.P. Deenadayalu Naidu in the fields of Social, Political and Scouting and Guiding in the Country. He was happy to meet the participants drawn from both the National and the State and very much impressed by the involvement of the SOC's who promised to make the National Jamboree a grand success.

Sri Kondajji. B. Shanmukhappa, Vice- President spoke on the occasion. Sri. Prabhudeva. J. Chigateri, State Treasurer, Sri. D.Venkatesh, Assistant State Commissioner(S), Smt. S.K. Prabha, Joint Sate Secretary(G), Sri. P.Palani, District Commissioner(S) and Headquarters Commissioner of Guide wing were Present.

Smt Janaki Venugopal, Headquarters Commissioner(G), Sri. Omeswaraiah, I/C ASOC, Sri.Simon Deepak, Life Member, Sri.O.Manjappa, Warden,Sri. N. Narayana Swamy, Camp Assistant, Sri. Subramani, Head Cook, Sri. Vittal Bachagundi and Smt. Kumari Honamma District Organisers assisted for the success of the meet along with other field workers.

## ಕಬ್ಸ್-ಬುಲ್‌ಬುಲ್ಸ್ / ಸ್ಕೌಟ್ಸ್-ಗೈಡ್ಸ್ / ರೋವರ್ಸ್-ರೇಂಜರ್ಸ್ ಹಾಗೂ ದಳನಾಯಕ - ದಳನಾಯಕಿಯರ ಗಮನಕ್ಕೆ

ದೀಪಾವಳಿ ದೀಪಗಳ ಹಬ್ಬ. ದೀಪ ಹಚ್ಚಿ ಪಟಾಕಿ ಸಿಡಿಸಿ ಸಂಭ್ರಮಿಸುವ ಸಂದರ್ಭ. ಎರಡನ್ನೂ ದೂರ ದೂರ ಬಳಸಿದರೆ ಬಾಳು ಬೆಳಗುತ್ತದೆ. ಸಂಭ್ರಮ ಹೆಚ್ಚುತ್ತದೆ. ಎರಡೂ ಒಟ್ಟುಗೂಡಿದರೆ ಬಾಳು ಗೋಳಾಗುತ್ತದೆ. ಸ್ಕೌಟ್-ಗೈಡ್ ಸಂಸ್ಥೆಯಲ್ಲಿರುವ ನಮಗೆ ಇದರ ಅರಿವು ಇರಬೇಕು. ಈ ಸಂಸ್ಥೆಯ ಸದಸ್ಯರಾಗಿ ಈ ಅರಿವನ್ನು ಸಾರ್ವಜನಿಕರಲ್ಲಿಯೂ ಮೂಡಿಸಬೇಕು. ಪಟಾಕಿಗಳನ್ನು ಹೆಚ್ಚಾಗಿ ಸುಡುವುದರಿಂದ ಆಗುವ ವಾಯುಮಾಲಿನ್ಯ, ಶಬ್ದಮಾಲಿನ್ಯ ಮುಂತಾದ ದುಷ್ಪರಿಣಾಮಗಳ ಬಗ್ಗೆ ನಾವು ಅರಿತು ಸಾರ್ವಜನಿಕರಲ್ಲಿಯೂ ಅರಿವು ಮೂಡಿಸಬೇಕು. ಆಗ ಮಾತ್ರ ಈ ಸಂಸ್ಥೆಯ ಸದಸ್ಯರಾಗಿ ಇರುವುದರ ಸಾರ್ಥಕತೆ.

ಇದರ ಬಗ್ಗೆ ನಿಮ್ಮ ಗ್ರಾಮಗಳಲ್ಲಿ, ನೆರೆಹೊರೆಯವರಲ್ಲಿ, ಬಡಾವಣೆಗಳಲ್ಲಿ ಅರಿವುಮೂಡಿಸಿ ಉಂಟಾಗಬಹುದಾದ ದುಷ್ಪರಿಣಾಮಗಳನ್ನು ಹಾಗೂ ಅಪಘಾತಗಳನ್ನು ತಡೆಯುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಲು ಕೋರಿದೆ. ಇದರಿಂದ ಪರಿಸರ ಸಂರಕ್ಷಣೆ ಮಾಡಿದ ಹಾಗೂ ವ್ಯಕ್ತಿಗಳಿಗೆ ನೋವಾಗದಂತೆ ತಡೆದ ತೃಪ್ತಿ ನಿಮ್ಮದಾಗುತ್ತದೆ. ಇದು ರಾಜ್ಯೋತ್ಸವದ ಸಂದರ್ಭಕ್ಕೂ ಅನ್ವಯಿಸುತ್ತದೆ. ಜಾಥಾಗಳ ಮೂಲಕ, ಭಿತ್ತಿ ಪತ್ರಗಳ ಮೂಲಕ, ಮನೆ ಮನೆಗಳಿಗೆ ಭೇಟಿ ಮೂಲಕ ಈ ಕಾರ್ಯವನ್ನು ಮಾಡಿರಿ.

- ರಾಜ್ಯ ಕಾರ್ಯದರ್ಶಿ

# The History & Purpose of the Scout Movement As told by Lord Baden Powell of Gilwell, the Founder of Scouting



In 1893-94, when serving with my regiment, the 13th HUSSARS, I realized that the ordinary peace training of soldiers for service in the field was not sufficiently practicable and I therefore carried out classes of training in my squadron for men individually in scouting and camping. In 1897-98, having been transferred to command the Fifth Dragon Guards, it carried on similar training but on improved lines with a view to developing character as well as field efficiency. since this was largely lacking in lads coming to the army from the ordinary schools.

My lectures and practices were collected and published in a small book "Aids to Scouting". During the South African War, 1899-1900.Maj. Lord Edward Cecil, my Chief Staff Officer, orgnised the boys of mafeking as a corps for general utility on Scout lines rather than those of cadets and the experiment was an entire success. The experiment taught me that if their training was made to appeal to them, boys would learn rapidly and also that boys were capable of taking responsibilities to a far greater degree than was ordinarily believed if only they were trusted.

In 1901, I raised the South African constabulary on lines of my own, the principles applicable to man. The troop was made a small unit, in order that the commander should be able to deal with each individual on personal knowledge of him; the system of patrols was initiated. of six men under a leader. Responsibility was thus given to the Junior Non-Commissioned Officers and emulation between the patrols produced a good spirit to the higher standard of efficiency all around. The human side was appealed to and the men trusted on their honour to a large degree in carrying out their duties. The uniform for field work was the cowboy hat, shirt, green tie and shorts. Badges were awarded for proficiency in different lines of work.



On my return to England in 1903, I found that among others, Miss. Mason head of a training school for teachers had adopted "Aids to Scouting" as a text book for their instruction in observation and education as a step of character training. In 1904, I schemed some ideas for scouting as a training for boys. In, 1905 I had a conversation with Sir William Smith. the founder of the Boys Brigade as to adapting the training for boys and I

offered to write a book for them on the lines of "Aids to Scouting" as a means of enthusing the boys and giving the wider scope of greater variety to their training for Citizenhood.

In 1907, I held a trial camp for scout training at Brown Sea Islands, at which I had boys of other schools, to experiment on, and its result exceeded my expectations and prompted me to go on with the idea. I had certainly never heard the title "Boy Scouts" before I applied it to the Boy Training in England in 1907.



The training was based on that which I had employed with soldiers and with the Constabulary, with some adaptation to make it suitable for boys following the principles adopted by the Zulus and other African tribes, which reflected some of the ideas of Epitetus, a celebrated stoic philosopher of the 1st century A.D., (lived and taught at Rome) and the methods of the Spartans, ancient British and Irish for training their boys. I also looked into Bushido of the Japanese as well as the most modern methods of John Founds in dealing with boys and John for their physical culture as well as those of today put into practice by Sir William Smith, Seton Thompson, Dan Beard and John more especially because he put into practice in modern times the idea of Livy of voluntary association of boys for improving their physique and developing thier patriotism. In 1908, I brought out the Handbook of the training entitled "Scouting for Boys" in six fortnightly parts. A number of troops were started in different parts of the United Kingdom before the series was half completed. Although I had only anticipated that scouting would be taken as an additional attraction for their boys by the "Boys Brigade" and "Church Lad Brigade", it became evident that a separate movement was required to deal with a number of boys who were taking it up unconnected with these bodies.

In 1910, the Boy Scout Movement had grown to such dimentions numbering 1,23,080 that I felt it incumbent upon me to leave the Army in order to take the movement in hand. With a view to making the subject appeal to boys and to meet their spirit of adventure, I help up for their ideal the doings of backwoodsman and knights, advenures really under the title of "Scouts". In their camp life, boat work, pioneering and nature study one could find all the attractions for a boy which at the same time would be the medium of instruction. I worked it out partly from my own experiences and partly from the general feeling of what was lacking in the training of the average school boy. The deficiency lay chiefly in the direction of character and general intelligence, skill of handricraft, services for others and for the state; physical development and health knowledge. The activities and practices of scouts were, therefore, framed as far as possible to develop these attributes.

**Ideals :** Honour was made the high ideal for the boys; the scout law on which the movement was hinged was taken from code of the knights.

**Administration:** Administration was decentralised as much as possible since I had seen how greatly other movements. were hampered by their centralisation.

**Organisation:** The troop was purposely kept small in number in order that the scoutmaster should have personal knowledge of each of his boys, this being the only possible way for developing the character of the Individual. The Patrol system was adopted from the constabulary, and for the same reason. All extensive system of badges was instituted as in the army and the constabulary for excellence in different branhes of work.

**The aim :** The aim of the movement was to make good citizens and for this reason it was judged unnecessary to introduce military drill.

My purpose in forming the Scout organisation was to counteract if possible, the deterioration of the moral and physical levels of the young people which shortned the rising generation and to train the boys to be more efficient and characterful citizens. The defect in existing boys' organisations was plain that they were not sufficiently attractive from the boys' point of view, nor wide enough in the scope of their training, nor sufficiently varied to meet the challengeable nature of the boy.

**ಸ್ಕೌಟ್, ಗೈಡ್‌ಗಳೇ, . . . . . . . . . . .**

ಮೈಸೂರು ನಿಮ್ಮನ್ನು ಕೈಬೀಸಿ ಕರೆಯುತ್ತಿದೆ
17ನೇ ರಾಷ್ಟ್ರೀಯ ಜಾಂಬೂರಿ ಸಮೀಪಿಸುತ್ತಿದೆ.
ಸಿದ್ಧತೆಗಳು ಭರದಿಂದ ಸಾಗಿವೆ.
ನೀವು ಸಿದ್ಧರಾಗಿರುವಿರಾ?
ಸಿದ್ಧರಾಗಿ
ಬನ್ನಿ
ಭಾಗವಹಿಸಿ
ಆನಂದಿಸಿ

**ವಯಸ್ಕ ನಾಯಕರೇ /ನಾಯಕಿಯರೇ**

ಚಿಂತಿಸಬೇಡಿ
ನಿಮಗೂ ಅವಕಾಶ ಉಂಟು
ಚಟುವಟಿಕೆ ನಾಯಕ/ಕಿ
ಜಾಂಬೂರಿ ಸೇವಾ ತಂಡ
ಸ್ಕೌಟ್ ಗೈಡ್‌ಗಳ ಜವಾಬ್ದಾರಿ
ಇತ್ಯಾದಿ
ನಿಮ್ಮ ಜಿಲ್ಲೆ / ರಾಜ್ಯ ಸಂಸ್ಥೆಯನ್ನು ಸಂಪರ್ಕಿಸಿ

**ರೋವರ್ / ರೇಂಜರ್‌ಗಳೇ**

ನಿಮಗೂಸಹ ಅವಕಾಶ ಉಂಟು
ರಕ್ಷಣಾಕಾರ್ಯ
ಸ್ವಯಂ-ಸೇವಕರು, ಇತ್ಯಾದಿ
ನಿಯೋಜನೆಗೆ ರಾಜ್ಯ ಸಂಸ್ಥೆಯನ್ನು ಸಂಪರ್ಕಿಸಿ

**ಕಬ್/ಬುಲ್‌ಬುಲ್ ಪುಟಾಣಿಗಳೇ**

ನೀವೂ ಬನ್ನಿ
ಕಬ್ಬಿಂಗ್‌ನ ಶತಮಾನೋತ್ಸವ ಸಮಾರಂಭದಲ್ಲಿ ಭಾಗವಹಿಸಿ

– ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ರಾಜ್ಯ ಸಂಸ್ಥೆ, ಬೆಂಗಳೂರು

# ಜಾಂಬೂರಿ

ಎನ್. ಶ್ರೀನಿವಾಸನ್
ಎಲ್.ಟಿ.(ಸ್ಕೌಟ್)

**"ಸ್ಕೌಟಿಂಗ್-ಗೈಡಿಂಗ್ ಒಂದು ಆಟ, ಸ್ಕೌಟಿಂಗ್-ಗೈಡಿಂಗ್ ಒಂದು ಶಿಕ್ಷಣ, ಸ್ಕೌಟಿಂಗ್-ಗೈಡಿಂಗ್ ಬದುಕುವ ಒಂದು ವಿಧಾನ"**

ಮೇಲ್ಕಾಣಿಸಿದ ಎಲ್ಲಾ ಉಕ್ತಿಗಳನ್ನು ಜಾಂಬೂರಿ ನಿರೂಪಿಸುತ್ತದೆ. ಜಾಂಬೂರಿ ಎಂದರೆ ಸಾಮಾನ್ಯ ಜನರಲ್ಲಿ ಅಷ್ಟೇ ಏಕೆ ಅನೇಕ ಸ್ಕೌಟ್ ಸೋದರರಲ್ಲಿಯೂ ಸಹ ತಪ್ಪು ಕಲ್ಪನೆ ಇದೆ. ಅದೊಂದು ಮಕ್ಕಳ ಸಂತೆ, ಮೋಜು ಮಾಡುವ ಮನೋರಂಜನೆಯ ತಾಣ, ಇತ್ಯಾದಿ. ಆದರೆ ಜಾಂಬೂರಿಯಲ್ಲಿ ಹಮ್ಮಿಕೊಳ್ಳಲಾಗುವ ವಿವಿಧ ಕಾರ್ಯಕ್ರಮಗಳನ್ನು ಕೂಲಂಕಷವಾಗಿ ಗಮನಿಸಿದಾಗ ನೈಜ ಚಿತ್ರಣ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಅದನ್ನು ಅರಿತಾಗ ಇಂತಹ ಮೇಳಗಳನ್ನು ಸ್ಕೌಟಿಂಗ್‌ನಲ್ಲಿ ಅಳವಡಿಸಿದ ಮಹಾನ್ ಪುರುಷ ಬೇಡೆನ್ ಪೊವೆಲ್‌ರಿಗೆ ನಮ್ಮ ಮನದಾಳದ ಅಭಿನಂದನೆಗಳು ತಾವಾಗಿಯೇ ಹೊರ ಹೊಮ್ಮುತ್ತದೆ. ಹಾಗಿಲ್ಲದಿದ್ದಲ್ಲಿ ಲಕ್ಷಾಂತರ ರೂ.ಗಳನ್ನು ವೆಚ್ಚ ಮಾಡಿ ಸಾವಿರಾರು ಮಕ್ಕಳನ್ನು ಅನೇಕ ದಿವಸಗಳ ಕಾಲ ಒಂದು ಕಡೆ ಕಲೆ ಹಾಕುವುದರಲ್ಲಿ ಅರ್ಥವಿಲ್ಲ.

1) ಆಟ ಅಥವಾ ಕ್ರೀಡೆಯ ಬಾಲಕರಿಗೆ ಮನೋರಂಜನೆಯ ಸಾಧನವಷ್ಟೇ ಅಲ್ಲ ಅದರಲ್ಲಿ ಅನೇಕ ಸಾಮರ್ಥ್ಯಗಳನ್ನು ಬೆಳೆಸುವ ಮಾರ್ಗವೂ ಆಗಿದೆ. ಆದರೆ ನಿಯಮಗಳಿಗೆ ಅನುಸಾರವಾಗಿ ಕ್ರೀಡಾಮನೋಭಾವದಿಂದ ಆಡಿದಾಗ ಮಾತ್ರ ನಿರೀಕ್ಷಿತ ಫಲಿತಾಂಶ ದೊರಕುತ್ತದೆ. ಕ್ರೀಡೆಗಳ ಮೂಲಕ ದ್ವೇಷ ದೂರವಾಗುತ್ತದೆ. ಮೈತ್ರಿ ವೃದ್ಧಿಸುತ್ತದೆ. ಈ ಅರ್ಥದಲ್ಲಿ ಸ್ಕೌಟಿಂಗ್-ಗೈಡಿಂಗ್ ಸಹ ಒಂದು ಆಟ, ನಿಯಮಗಳಿಗನುಸಾರವಾಗಿ ನುರಿತ ವಯಸ್ಕ ನಾಯಕರ ಉತ್ತಮ ಮಾರ್ಗದರ್ಶನದಲ್ಲಿ ಕ್ರೀಡಾ ಮನೋಭಾವದಿಂದ ಆಡಿದಾಗ ಸ್ಕೌಟಿಂಗ್-ಗೈಡಿಂಗ್ ಆನಂದದಾಯಕವಾಗಿರುತ್ತದೆ. ಜಾಂಬೂರಿಗಳಲ್ಲಿ ಪ್ರತಿಯೊಂದು ಕಾರ್ಯವು ನಿಯಮಗಳಿಗೆ ಒಳಪಟ್ಟು (ಸ್ಕೌಟ್-ಗೈಡ್ ನಿಯಮ) ವೇಳಾಪಟ್ಟಿಯಂತೆ ಕಾರ್ಯಗತಗೊಳ್ಳುತ್ತದೆ. ಪ್ರತಿ ಸ್ಕೌಟ್-ಗೈಡ್ ಸಹ ಭಾಗವಹಿಸುವ ಅವಕಾಶ ಇರುತ್ತದೆ. ಇದರ ಚಟುವಟಿಕೆಗಳಲ್ಲಿ ಭಾಗವಹಿಸುವ ಸ್ಕೌಟ್-ಗೈಡ್‌ಗಳಲ್ಲಿ ಮೈತ್ರಿ ವೃದ್ಧಿಸುತ್ತದೆ. ಹರ್ಷ ಮೂಡುತ್ತದೆ, ನೋವು ಮಾಯವಾಗುತ್ತದೆ.

2) ಶಾರೀರಿಕ ಬೌದ್ಧಿಕ ಹಾಗೂ ಪಾರಮಾರ್ಥಿಕ ಚೈತನ್ಯಗಳನ್ನು ಬೆಳೆಯಲು ಅವಕಾಶ ಮಾಡಿಕೊಟ್ಟು ಅದರ ಸರ್ವಾಂಗೀಣ ಬೆಳವಣಿಗೆಗೆ ಸಹಕಾರಿಯಾಗುತ್ತದೆ. ಶಿಕ್ಷಣದ ಉದ್ದೇಶ ನಮ್ಮ ಸಂಸ್ಥೆಯ ಉದ್ದೇಶವೂ ಸಹ ಇದೇ ಆಗಿದೆ.

ಅಂತಹ ಅವಕಾಶಗಳು ಜಾಂಬೂರಿಗಳಲ್ಲಿ ಸಾಕಷ್ಟು ಒದಗಿಬರುತ್ತವೆ. ಬೆಳಗಿನ ವ್ಯಾಯಾಮ, ಕವಾಯಿತು, ಪಥ ಸಂಚಲನೆ, ಸಾಹಸಮಯ ಚಟುವಟಿಕೆಗಳು, ಸಾಮೂಹಿಕ ಪ್ರದರ್ಶನಗಳು ಇತ್ಯಾದಿಗಳ ಮೂಲಕ ಬಾಲಕರ ಶಾರೀರಿಕ ಚೈತನ್ಯ ವೃದ್ಧಿಸುತ್ತದೆ.; ಸ್ವಚ್ಛವಾದ ವಾತಾವರಣದಲ್ಲಿ ವಾಸ ಮಾಡುವುದರಿಂದ ಆರೋಗ್ಯ ಸುಧಾರಿಸುತ್ತದೆ. ರಸಪ್ರಶ್ನೆಗಳು, ಪ್ರತಿಭಾ ಪ್ರದರ್ಶನ, ಸ್ಕೌಟ್ ಕೌಶಲ್ಯಗಳ ಪ್ರದರ್ಶನ, ಇತ್ಯಾದಿ ಚಟುವಟಿಕೆಗಳ ಮೂಲಕ ಬಾಲಕರ ಬೌದ್ಧಿಕ ವಿಕಾಸವುಂಟಾಗುತ್ತದೆ.

ಬೆಳಗಿನ ಧ್ವಜಾರೋಹಣಾ ಸಮಾರಂಭ, ಭೋಜನಕ್ಕೆ ಮುನ್ನ ಪ್ರಾರ್ಥನೆ ಸರ್ವಧರ್ಮ ಪ್ರಾರ್ಥನೆ, ಶಿಬಿರಾಗ್ನಿಯ ಅಂತ್ಯದಲ್ಲಿ ಪ್ರಾರ್ಥನೆ ಇತ್ಯಾದಿ ಸಂದರ್ಭಗಳಲ್ಲಿ ದೈವಚಿಂತನೆಯನ್ನು ಮೂಡಿಸಿ, ಸರ್ವಶಕ್ತನಾದ ಭಗವಂತನ ಎಡೆಗೆ ಮನಸ್ಸನ್ನು ಕೇಂದ್ರೀಕರಿಸುವುದರಿಂದ ಬಾಲಕರಲ್ಲಿರುವ ಪಾರಮಾರ್ಥಿಕ ಚೈತನ್ಯ ಉದ್ಧೀಪನಗೊಂಡು ನೈತಿಕಬಲ ಹೆಚ್ಚುತ್ತದೆ. ಮಾನಸಿಕ ಪರಿಶುದ್ಧತೆ ಉಂಟಾಗುತ್ತದೆ.

ಇವೆಲ್ಲವನ್ನು ಅರಿಯುವ, ಅರಿತು ಚೈತನ್ಯ ಪೂರ್ಣನಾಗುವ ತನ್ಮೂಲಕ ಜವಾಬ್ದಾರಿಯುತ ಪ್ರಜೆಯಾಗಿ ನಮ್ಮ ಸಂಸ್ಥೆಯ ಉದ್ದೇಶವನ್ನು ಸಾಧಿಸುವ ಮಾರ್ಗ ಜಾಂಬೂರಿ ಸಂಘಟನೆಯಾಗಿದೆ.

3) ಕುವೆಂಪುರವರು ತಮ್ಮ ವಿಶ್ವಮಾನವ ಸಂದೇಶದಲ್ಲಿ ತಿಳಿಸಿರುವ 'ಏನಾದರೂ ಆಗು ಮೊದಲು ಮಾನವನಾಗು' ಎನ್ನುವ ನುಡಿಯಂತೆ ನಮ್ಮ ಸ್ಕೌಟ್-ಗೈಡ್‌ಗಳು ಮಾನವರಾಗಿ ಬದುಕಲು ಕಲಿಯಬೇಕು. ಇದುವೇ ಸ್ಕೌಟಿಂಗ್-ಗೈಡಿಂಗ್. ಯಾವ ವ್ಯಕ್ತಿ ಸ್ಕೌಟಿಂಗ್-ಗೈಡಿಂಗ್ ಅನ್ನು ಪೂರ್ಣವಾಗಿ ತನ್ನದಾಗಿಸಿಕೊಂಡಿರುವನೋ ಮತ್ತು ಅದರ ನಿಯಮ ಹಾಗೂ ಭಾಷೆಯನ್ನು ಚೆನ್ನಾಗಿ ಅರಿತಿರುವನೋ ಅವನೇ ನಿಜವಾದ ಅರ್ಥದಲ್ಲಿ ಮಾನವ. ಈ ರೀತಿಯಾಗಿ ಸ್ಕೌಟಿಂಗ್-ಗೈಡಿಂಗ್ ಎನ್ನುವುದು ಬದುಕುವ ಒಂದು ವಿಧಾನವಾಗಿದೆ.

ಜಾಂಬೂರಿಗಳಂತಹ ಮೇಳಗಳಲ್ಲಿ ಬಾಲಕರು ಬದುಕುವ ವಿಧಾನವನ್ನು ಕಲಿಯುತ್ತಾರೆ. ಸಹಬಾಳ್ವೆಯು ಬದುಕುವ ವಿಧಾನದ ಯಶಸ್ಸಿನ ಗುಟ್ಟು. ಈ ರೀತಿಯ ಬಾಳ್ವಿಕೆಗೆ ಜಾಂಬೂರಿಗಳಲ್ಲಿ ಅವಕಾಶಗಳಿವೆ.

ವಿವಿಧ ಜಿಲ್ಲೆಗಳಿಂದ ವಿವಿಧ ಊರುಗಳಿಂದ ಬಂದಿರುವ, ಈ ಮೊದಲು ಪರಿಚಯವಿಲ್ಲದ ಸ್ಕೌಟ್‌ಗಳು ಒಂದೇ ಕಡೆ, ಒಂದೇ ಗುಡಾರದಲ್ಲಿ ಕೆಲವು ದಿವಸಗಳ ಕಾಲ ವಾಸಿಸಿ ಸಹ ಭೋಜನ ನಡೆಸಿ, ಚಟುವಟಿಕೆಗಳಲ್ಲಿ ಭಾಗವಹಿಸಿ ಸಹಬಾಳ್ವೆಯ ಮೊದಲ ಪಾಠಗಳನ್ನು ಕಲಿಯುತ್ತಾರೆ.

ಪರಮತಸಹಿಷ್ಣುತೆಯು ನೆಮ್ಮದಿಯ ಬದುಕಿಗೆ ಅತ್ಯಂತ ಮಹತ್ವದ ಅಂಶ. ಈ ಗುಣವು ಜಾಂಬೂರಿಗಳಲ್ಲಿ ತಾನೇ ತಾನಾಗಿ ಬೆಳೆಯುತ್ತದೆ. ವಿವಿಧ ಜಾತಿಗಳು, ವಿವಿಧ ಧರ್ಮಗಳ, ವಿವಿಧ ಕೋಮುಗಳ ಬಾಲಕರು ಒಂದೇ ಕಡೆ ಕಲೆತು ಸಹೋದರರಂತೆ ಬಾಳುತ್ತಾರೆ. ಹಿಂದೂಗಳು, ಕ್ರೈಸ್ತರು, ಮುಸಲ್ಮಾನರು ಹೀಗೆ ಎಲ್ಲಾ ಧರ್ಮದವರೂ ತಮ್ಮ ತಮ್ಮ ಸಂಕುಚಿತ ಭಾವನೆಗಳನ್ನು ಒಟ್ಟು ಒಂದಾಗಿ ಇರುವುದನ್ನು ಕಲಿಯುತ್ತಾರೆ. ಎಲ್ಲಾ ಧರ್ಮದವರೂ ಸೇರಿ ಒಂದೇ ವೇದಿಕೆಯ ಮೇಲೆ ಪ್ರಾರ್ಥನೆ ಸಲ್ಲಿಸುವ ಸರ್ವಧರ್ಮ ಪ್ರಾರ್ಥನೆಯಿಂದ ಕೋಮು ಸೌಹಾರ್ದತೆ ಬೆಳೆಯುತ್ತದೆ.

ಶಿಸ್ತುಬದ್ಧ ಜೀವನ ನಡಸುವುದನ್ನು ಸ್ಕೌಟ್-ಗೈಡ್‌ಗಳು ಇಲ್ಲಿ ಕಲಿಯುತ್ತಾರೆ. ಪ್ರಾತಃಕಾಲದ ವ್ಯಾಯಾಮದಿಂದ ಪ್ರಾರಂಭಿಸಿ ರಾತ್ರಿ ಮಲಗುವವರೆಗೆ ಪ್ರತಿ ಕಾರ್ಯಕ್ರಮವೂ ಸಹ ಗಡಿಯಾರದ ಮುಳ್ಳಿನಂತೆ ಕ್ಲುಪ್ತ ವೇಳೆಗೆ ನಡೆಯುತ್ತದೆ. ಎಲ್ಲಾ ಸ್ಕೌಟ್-ಗೈಡ್‌ಗಳೂ ಅದಕ್ಕೆ ಬದ್ಧರಾಗಿರಬೇಕು. ಪೆಟ್ರೋಲ್ ಪದ್ಧತಿಯ ಅನುಷ್ಠಾನದಿಂದ ಶಿಸ್ತು ವೃದ್ಧಿಯಾಗುತ್ತದೆ. ಪ್ರತಿ ಕೆಲಸದಲ್ಲೂ, ಶಿಸ್ತು, ಕ್ರಮಬದ್ಧತೆ, ಅಚ್ಚುಕಟ್ಟುತನ ಇದ್ದಾಗಲೇ ಬದುಕು ಆನಂದದಿಂದ ಎಂಬುದನ್ನು ಮನಗಾಣುತ್ತಾರೆ.

ಮೇಲೆ ತಿಳಿಸಿದ ಎಲ್ಲವೂ ಬಾಲಕ-ಬಾಲಕಿಯರ ದೃಷ್ಟಿಯಿಂದ ಇದ್ದರೂ ಸಹ ಅವು ಜಾಂಬೂರಿಯಲ್ಲಿ ಭಾಗವಹಿಸುವ ವಯಸ್ಕ ನಾಯಕರಿಗೂ ಸಹ ಅನ್ವಯಿಸುತ್ತದೆ. ಬಾಲಕ-ಬಾಲಕಿಯರಿಂದಾಗಿ ಇಂತಹ ಹಿರಿದಾದ, ಚಟುವಟಿಕೆಗಳಿಂದ ಕೂಡಿದ ಶೈಕ್ಷಣಿಕವಾದ ಒಂದು ಮೇಳವನ್ನು ಸಂಘಟಿಸುವಾಗ ಅದಕ್ಕಾಗಿ ನಡೆಸುವ ಪೂರ್ವ ಸಿದ್ಧತೆ ಕಾರ್ಯಗತಗೊಳಿಸುವಿಕೆ, ಭಾಗವಹಿಸುವಿಕೆ, ಮೇಲ್ವಿಚಾರಣೆ ನಿರ್ದೇಶನ ಇತ್ಯಾದಿ ಹಂತಗಳಲ್ಲಿ ವಯಸ್ಕ ನಾಯಕರು ಸ್ಕೌಟ್-ಗೈಡ್ ಬಾಲಕ-ಬಾಲಕಿಯರೊಂದಿಗೆ ಸ್ಕೌಟಿಂಗ್-ಗೈಡಿಂಗನ್ನು

**"ಒಂದು ಆಟವಾಗಿ ಆಡುತ್ತಾರೆ**
**ಒಂದು ಶಿಕ್ಷಣವಾಗಿ ಕಲಿಯುತ್ತಾರೆ.**
**ಒಂದು ಬದುಕುವ ವಿಧಾನವಾಗಿ ಬದುಕುತ್ತಾರೆ."**

ಜಾಂಬೋರಿಯ ಬಗ್ಗೆ ಬೇಡನ್ ಪೊವೆಲ್ಲರು ಹೇಳಿರುವ ಮಾತುಗಳು ಇಲ್ಲಿ ಉದ್ಧರಣೀಯ.

"ಒಬ್ಬ ಬಾಲಕನ-ಬಾಲಕಿಯ ಸರಾಸರಿ ಸ್ಕೌಟ್-ಗೈಡ್ ಜೀವನ ಕಡಿಮೆ ಅವಧಿಯದು. ಪ್ರತಿ ತಲೆಮಾರಿನ ಸ್ಕೌಟ್-ಗೈಡ್‌ಗಳು ಕನಿಷ್ಠ ಒಂದು ದೊಡ್ಡ ರ‍್ಯಾಲಿಯನ್ನು ನೋಡುವುದು ಉತ್ತಮ. ಏಕೆಂದರೆ ಆ ಬಾಲಕರು ನಿಜವಾಗಿಯೂ ಹಿರಿಯ ಸೋದರತ್ವದ ಸದಸ್ಯನಾಗಿರುವುದನ್ನು ಅಲ್ಲಿ ಮನಗಾಣುತ್ತಾನೆ. ಅವನ ನೂತನ ಸ್ಕೌಟಿಂಗ್ ವಿಧಾನಗಳನ್ನು ಶಿಬಿರವಾಸದ ಉಪಕರಣಗಳನ್ನು ಕಲಿಯುತ್ತಾನೆ ಹಾಗೂ ಅನುಭವದಿಂದ ಒಬ್ಬ ಉತ್ತಮ ಸ್ಕೌಟ್-ಗೈಡ್ ಆಗುತ್ತಾರೆ ಮತ್ತು ಸಹ ಸ್ಕೌಟರ್-ಗೈಡರ್‌ಗಳಲ್ಲಿ ತಂಡ ಕಾರ್ಯದ ಬೆಳವಣಿಗೆ ಮತ್ತು ಸಂಘಟನಾ ಕ್ಷಮತೆ ಬೆಳೆಸುವಲ್ಲಿ ಇಂತಹ ರ‍್ಯಾಲಿಗಳು ಅತ್ಯಂತ ಮಹತ್ವವಾದವುಗಳು. ಇದರಿಂದ ಸ್ಕೌಟಿಂಗ್-ಗೈಡಿಂಗ್ ಮಟ್ಟ ಸಾಕಷ್ಟು ಉನ್ನತಿಗೇರುತ್ತದೆ.

ನಮ್ಮ ತರಬೇತಿಯ ವಿಧಾನಗಳು ಹಾಗೂ ಫಲಿತಾಂಶಗಳ ಈ ಪ್ರದರ್ಶನಗಳಿಂದ ಸಾರ್ವಜನಿಕರಲ್ಲಿ ನಮ್ಮ ಕಾರ್ಯದ ಬಗ್ಗೆ ನೈಜ ಅನುಕಂಪ ಹಾಗೂ ತಿಳುವಳಿಕೆ ಮೂಡುತ್ತದೆ."

ಮೊದ ಮೊದಲು ಸ್ಕೌಟ್-ಗೈಡ್‌ಗಳ ಎಲ್ಲಾ ಮೇಳಗಳನ್ನು "ಜಾಂಬೋರಿ" ಎಂತಲೂ ಕರೆಯುತ್ತಿದ್ದರು. ಈಗ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಮೇಳಗಳನ್ನು 'ಜಾಂಬೋರಿ' ಎಂತಲೂ ರಾಜ್ಯಮಟ್ಟದ ಹಾಗೂ ವಿಭಾಗ ಮಟ್ಟದ ಮೇಳಗಳನ್ನು 'ಜಾಂಬೋರೆಟ್' ಎಂತಲೂ ಕರೆಯುತ್ತಾರೆ.

ಪ್ರಸ್ತುತ ಮೈಸೂರಿನ ಅಡಕನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ 17ನೇ ರಾಷ್ಟ್ರೀಯ ಜಾಂಬೂರಿ ನಡೆಯಲಿದೆ ದಿ. 29.12.2016 ರಿಂದ 04.01.2017 ರ ವರೆಗೆ ನಡೆಯುವ ಈ ಜಾಂಬೂರಿಯಲ್ಲಿ ದೇಶದ ವಿವಿಧ ರಾಜ್ಯಗಳ ಸ್ಕೌಟ್-ಗೈಡ್‌ಗಳಲ್ಲದೆ, ವಿದೇಶಗಳಿಂದಲೂ ಭಾಗವಹಿಸಲಿದ್ದಾರೆ. ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀ ಪ್ರಣಬ್ ಕುಮಾರ್ ಮುಖರ್ಜಿ ಒಳಗೊಂಡಂತೆ ಅನೇಕ ರಾಜ್ಯ-ರಾಷ್ಟ್ರದ ಹಾಗೂ ವಿದೇಶಗಳ ಅನೇಕ ಗಣ್ಯರು ವಿವಿಧ ದಿನಗಳಂದು ಆಗಮಿಸಲಿದ್ದಾರೆ.

**ಸಾಹಸ ಪ್ರದರ್ಶನ, ಕೌಶಲ ಪ್ರದರ್ಶನ ಇತ್ಯಾದಿಗಳಿಗೆ ನಿಮಗೆ ಅವಕಾಶಗಳಿವೆ. ಬನ್ನಿ ಭಾಗವಹಿಸಿ, ಆನಂದಿಸಿ.**

## ಆರು ವಯಸ್ಸಿನ ಮಕ್ಕಳಿಗೆ ನೂರು ವರ್ಷದ ಸಂಭ್ರಮ !!!
## ಅರೇ। ಮರಿಗಳ ವಿಭಾಗದ ಶತಮಾನೋತ್ಸವ (Cubbing Centenary)

- ರಾ. ಚಂದ್ರಶೇಖರನ್, ಎಲ್.ಟಿ (ಕಬ್ಸ್)

ಹೌದು 1907 ರಲ್ಲಿ ಸ್ಕೌಟಿಂಗ್ ಅಧಿಕೃತವಾಗಿ ಪ್ರಾರಂಭವಾಯಿತು. 1909 ಲಂಡನ್‌ನಲ್ಲಿ "ಕ್ರಿಸ್ಟಲ್ ಪ್ಯಾಲೆಸ್" ರ್‍ಯಾಲಿ ನಡೆಯಿತು. ಆಗ ನೆರೆದಿದ್ದ ಹಿರಿಕಿರಿಯರೆನ್ನದೆ, ಲಿಂಗ ಭೇಧ ವಿಲ್ಲದ ಅಪಾರ ಸ್ಕೌಟ್ ಸಾಗರವು ಸಂಸ್ಥಾಪಕ ಬಿ.ಪಿ. ಅವರನ್ನೂ ಬೆರಗುಗೊಳಿಸಿತು. ಸಂಸ್ಥಾಪಕರಿಗೆ ಆಗ ಮನೋದ್ವೇಗ ಉಂಟಾಯಿತು. ತಾವು ರೂಪಿಸಿದ ಕಷ್ಟಕರದ ಕಗ್ಗಾಡು ಜೀವನವೆಲ್ಲಿ? ಈಗ ತಾನೇ ಪ್ರಪಂಚಕ್ಕೆ ಕಾಲಿಟ್ಟ, ಬೆಳೆಯುತ್ತಿರುವ ಪುಟ್ಟ ಮಕ್ಕಳೆಲ್ಲಿ? ಅಲ್ಲದೆ ಮನೆಯನ್ನು ನೋಡಿಕೊಂಡು, ಮಕ್ಕಳನ್ನು ಜೋಪಾನ ಮಾಡುವ, ಸಂಸಾರ ನಿಭಾಯಿಸುವ ಜವಾಬ್ದಾರಿ ಇರುವ ಹೆಣ್ಣು ಮಕ್ಕಳೆಲ್ಲಿ? ಹಾಗಾಗಿ ಪ್ರಾರಂಭವಾದುದು ಗರ್ಲ್ ಗೈಡಿಂಗ್. ಈ ಸಂಘಟನೆಗೆ ಅವರ ಸೋದರಿ ಅಗ್ನೆಸ್ ಮತ್ತು ಪತ್ನಿ ಒಲೇಲ್ ಸೋಮ್ಸ್ ಅವರ ಸಹಾಯ ಪಡೆದರು. ಆದರೆ ಪುಟ್ಟ ಮಕ್ಕಳು?

ಬಿ.ಪಿ ಇನ್ನು ಪುಟ್ಟ ಮಕ್ಕಳ ಬಗ್ಗೆ ಬಹಳವಾಗಿ ಯೋಚಿಸಿದರು. ಆಗಿನ್ನೂ ಅವರು ಸೈನ್ಯ ಸೇವೆಯಲ್ಲಿಯೇ ಇದ್ದರು. ಹಾಗಾಗಿ ಅವರು ಆಫ್ರಿಕಾದ ಕಗ್ಗಾಡುಗಳಲ್ಲಿ ಸೈನ್ಯ ಕಾರ್ಯಾಚರಣೆ ಮಧ್ಯೆ, ಅಷ್ಟೋ ಇಷ್ಟೋ ಬಿಡುವು ಮಾಡಿಕೊಂಡು ಪುಸ್ತಕಗಳನ್ನು ಓದುತ್ತಿದ್ದರು. ಅವರು ಓದುಗರಲ್ಲವೆ? ಹಾಗೆ ಓದಿದ ಪುಸ್ತಕಗಳಲ್ಲಿ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ "ಜಂಗಲ್ ಬುಕ್ " ಪುಸ್ತಕವೂ ಒಂದು. ಅದು ನೆನಪಿಗೆ ಬಂದಿತು. ಕಿಪ್ಲಿಂಗ್ ಅವರಿಗೆ ಜರೆದು ಆ ಕತೆಗಳನ್ನು ತಮ್ಮ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲು ಅನುಮತಿ ಪಡೆದರು. ಕೊಡಲೇ ಕಾರ್ಯ ಪ್ರವೃತ್ತರಾದರು. ಕಬ್ಬಿಂಗ್ ವಿಭಾಗದ ಯೋಜನೆ ತಯಾರಿಸಿದರು. ಆ ಕತೆಗಳಲ್ಲಿ ಪುಟ್ಟ ಮಕ್ಕಳ ಸಹಜ ಗುಣಗಳಾದ ಸಾಹಸ ಪ್ರವೃತ್ತಿ, ಕುತೂಹಲ, ಕಲ್ಪನಾ ಶಕ್ತಿ, ಅಭಿನಯ, ಆಟ, ಅನುಕರಣೆ ಮುಂತಾದ ಅನೇಕ ಚಟಿವಟಿಕೆಗಳಿಗೆ ವಿಫುಲ ಅವಕಾಶಗಳಿರುವುದನ್ನು ಮನಗಂಡರು.

ಈ ಎಲ್ಲಾ ಪ್ರವೃತ್ತಿಗಳು ಮಕ್ಕ: ಸಚ್ಚಾರಿತ್ರ್ಯವನ್ನು ರೂಪಿಸುವಲ್ಲಿ ವಹಿಸುವ ಪ್ರಮುಖ ಪಾತ್ರವನ್ನು ಕಂಡುಕೊಂಡರು. ಹಾಗಾಗಿ ಕಿಪ್ಲಿಂಗ್ ಕತೆಗಳನ್ನೂ, ಆದರಲ್ಲಿ ಕಂಡುಬರುವ ಎಲ್ಲಾ ಗುಣ ವಿಶೇಷಗಳನ್ನೂ ತಮ್ಮ ಯೋಜನೆಯಲ್ಲಿ ಅಳವಡಿಸಿದರು. 1916 ರಲ್ಲಿ ಅಧಿಕೃತವಾಗಿ ಮರಿಗಳ ವಿಭಾಗವು ಪ್ರಾರಂಭವಾಗಿ ಬಿಟ್ಟಿತು.

ಭಾರತದಲ್ಲಿಯೂ ಏಕಕಾಲದಲ್ಲಿ ಕಬ್ಬಿಂಗ್ ಪ್ರಾರಂಭವಾಯಿತು, ನಿಧಾನವಾಗಿಯಾದರೂ, ಪ್ರಗತಿಹೊಂದುತ್ತಾ ಸಾಗಿತು. ಮೊದಲಿಗೆ ಬ್ರಿಟಿಷ್ ಆಡಳಿತ ಪ್ರದೇಶಗಳು, ಆ ಬಳಿಕ ಐನೂರಕ್ಕೂ ಹೆಚ್ಚು ರಾಜ, ಮಹರಾಜ, ನವಾಬರುಗಳು ಆಳುತಿದ್ದ ರಾಜ್ಯಗಳಲ್ಲಿ ನೆಲೆಗೊಂಡಿತು. ಕರ್ನಾಟಕ (ಅಂದಿನ ಮೈಸೂರು ಸಂಸ್ಥಾನ) ದಲ್ಲಿಯೂ ಈ ರೀತಿ 1918ರಲ್ಲಿ ಪ್ರಾರಂಭವಾದ ಮರಿಗಳ ಹಿಂಡುಗಳಲ್ಲಿ ಇಂದಿಗೂ ಜೀವಂತವಾಗಿ ಮುಂದುವರೆಯುತ್ತಿರುವ 21ನೇ ಬೆಂಗಳೂರು ಶ್ರೀ ಚಾಮುಂಡಿ ಮುಕ್ತದಳದ ಹಿಂಡನ್ನೂ ಅದರ ಸಂಸ್ಥಾಪಕ, ಕರ್ನಾಟಕದ ಬಿ.ಪಿ ಎಂದು ಪ್ರಖ್ಯಾತರಾಗಿದ್ದ ಎಂ. ಹಚ್. ರಾಮಚಂದ್ರ ರಾವ್ ಅವರನ್ನೂ ಇಲ್ಲಿ ನೆನೆಯಲೇಬೇಕು. ಕಾಕತಾಳೀಯವಾಗಿ 1918 ರಲ್ಲಿ ಜನಿಸಿದ ರಾಜಕುಮಾರ ಶ್ರೀ ಜಯಚಾಮರಾಜ ಒಡೆಯರ್ ಅವರು ವಯಸ್ಸಿಗೆ ಬಂದಂತೆ "ಕಬ್" ಆದರು. ಅವರಿಗೆ ಶ್ರೀ ಸಿರೂರ್ ಎಂಬುವರು ಕಬ್ ಮಾಸ್ಟರ್ ಆಗಿದ್ದರು. ಶ್ರೀ ಎಂ. ಹೆಚ್. ಆರ್. ಸ॥ ಕಬ್ ಮಾಸ್ಟರ್ ಆಗಿದ್ದರು. ರಾಜಕುಮಾರ ಶ್ರೀ ಜಯಚಾಮರಾಜ್ ಒಡೆಯರ್ ಅವರು ದೀಕ್ಷೆ ಪಡೆದ ಕೂಡಲೇ ಅವರನ್ನು "ಚೀಫ್ ಕಬ್" ಎಂದು ಘೋಷಿಸಲಾಯಿತು. ಇದರಿಂದ ಮರಿಗಳ ವಿಭಾಗದ ಬೆಳವಣಿಗೆಗೆ ಮತ್ತುಷ್ಟು ಸ್ಫೂರ್ತಿದೊರೆಯಿತು.





ಮರಿಗಳ ವಿಭಾಗದ ಪ್ರಾರಂಭಿಕ ದಿನಗಳಲ್ಲಿ ಅನೇಕ ಮಹನೀಯರುಗಳು ದುಡಿದರಾದರೂ, ಶ್ರೀ ಎಂ. ಹೆಚ್. ಆರ್ ಮತ್ತು ಶ್ರೀ ಸಿರೂರ್ ಅವರಲ್ಲದೆ, ಕನ್ನಡಕ್ಕೇ ಅಳವಡಿಸಿ ಕಾರ್ಯ ಪ್ರವೃತ್ತವಾಗಿದ್ದ ಶ್ರೀ ಕಶ್ಯಪ, ಶ್ರೀ ವಿ.ಎಸ್. ರಆಮಚಂದ್ರರಾವ್,



ರಾಮಸ್ವಾಮಿ ಐಂಗಾರ್, ಹೊಯ್ಸಳ, ದಿನಕರದೇಸಾಯಿ, ಎ. ವಾಸುದೇವರಾವ್, ಸಿ. ಸುಬ್ಬರಾವ್, ಶ್ರೀ ಮು. ವೆಂಕಟಕೃಷ್ಣಪ್ಪ, ಶ್ರೀ ಎಸ್. ಭೈರಪ್ಪ, ಶ್ರೀ ವೈ.ಜಿ ಶಾಂತರಾಜಯ್ಯ ಅವರುಗಳನ್ನು ನೆನೆಯಲೇಬೇಕು. ಅವರುಗಳ ಮೂಲಕ ಮರಿಗಳ ಕೂಗು, ಮೌಗ್ಲಿ ಕತೆಗಳು, ಕಾಡು ಕುಣಿತಗಳು, ಸಿದ್ದನ ತಮಟೆ, ಮರಿಗಳ ಪುಸ್ತಕ, ಮರಿಗಳ ಮುಂತಾದ ಕಬ್ಬಿಂಗ್ ಸಂಬಂಧ ಪುಸ್ತಕಗಳು ಕನ್ನಡದಲ್ಲಿ ಬೆಳಕು ಕಂಡವು. ಅದೇ ಸಮಯದಲ್ಲಿ ಶ್ರೀ ಹೆಚ್. ಆರ್. ಅಬ್ದುಲ್ ಗಫಾರ್ ಅವರ ಪರಿಶ್ರಮದಿಂದ ಮರಿಗಳ ಕೂಗು ಪುಸ್ತಕವು ಉರ್ದುಭಾಷೆಯಲ್ಲಿ ಬೆಳಕು ಕಂಡಿತು. ಮತ್ತೊಂದು ವಿಶೇಷವೆಂದರೆ ಇಂಗ್ಲಿಷ್ ವ್ಯಾಮೋಹವು ಪರಕಾಷ್ಠೆಯಲ್ಲಿದ್ದ ಆ ಕಾಲದಲ್ಲಿ ಮರಿಗಳ ಘನವಂದನೆ, ನಿಯಮ, ಕುಣಿತಗಳು ಅಭಿನಯಗಳು. ಇಂಗ್ಲಿಷ್‌ಪದಗಳಿಗೆ ತಾಳ, ಲಯಗಳಿಗೆ ಬದ್ಧವಾಗಿರುವಂತೆ ಕನ್ನಡದಲ್ಲೇ ಅಳವಡಿಕೆಯಾಗಿ ಅಭಿನಯ, ಆವಾಜ್, ಬೆಳಕು ಕಂಡದ್ದು, ಧ್ವನಿ ಕೂಡಿಬಂದದ್ದು.

**ಚಿತ್ರ ಘನವಂದನೆ,**

ಮರಿಗಳ ವಿಭಾಗವು ಪ್ರಕಾಶಮಾನವಾಗಲು ಕಾರಣರಾದ ಅಂದಿನ ರಾಜ್ಯ ಮುಖ್ಯ ಆಯುಕ್ತರುಗಳಾಗಿದ್ದ ಚೀಫ್ ಜಸ್ಟಿಸ್ ಕೆ. ಶಂಕರ ನಾರಾಯಣ ರಾವ್, ಮೇಜರ್ ವೈ.ವಿ.ಕೆ. ಮೂರ್ತಿ, ಪ್ರೊ॥ ಪಿ. ಶಿವಶಂಕರ್ ಇವರುಗಳನ್ನೂ, ಶ್ರೀಯುತರುಗಳಾದ ಕೆ. ಕಾಶೀನಾಥ್, ಡಾ॥ ಹರಿಯಪ್ಪ, ಎಸ್.ವಿ. ರಂಗಣ್ಣ, ಸಿ. ಶೇಷಾಚಾರ್ ಮುಂತಾದ ಮಹನೀಯರುಗಳನ್ನೂ, ಸ್ವಾತಂತ್ರ್ಯ ನಂತರದಲ್ಲಿ ಭದ್ರ ನೆಲೆಗಟ್ಟಿನ ಸೌಧ ನಿರ್ಮಾಣ ಕಾರ್ಯದಲ್ಲಿ ಮುಂದುವರೆದು ತೊಡಗಿರುವ ರಾಜ್ಯ ಮುಖ್ಯ ಆಯುಕ್ತರುಗಳು ದಿ॥ ಗಳಾದ ಜೆ.ಬಿ. ಮಲ್ಲಾರಾಧ್ಯ, ಕೊಂಡಜ್ಜಿ ಬಸಪ್ಪ, ದೀನದಯಾಳು ನಾಯ್ಡು ರವರು, ಈಗ ರಾಜ್ಯ ಸಂಸ್ಥೆ ಉಪಾಧ್ಯಕ್ಷರಾಗಿರುವ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಮತ್ತು ಪ್ರಸ್ತುತ ರಾಜ್ಯ ಪ್ರಧಾನ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರುಗಳನ್ನೂ ನೆನೆಯಲೇಬೇಕು.

**ಚಿತ್ರ– ಅಭಿನಯ**

ಇಡೀ ವಿಶ್ವದಾದ್ಯಂತ ಮರಿಗಳ ವಿಭಾಗವು ಶತಮಾನೋತ್ಸವವನ್ನು ಆಚರಿಸುತ್ತಿದೆಯಾದರೂ, ಭಾರತದಲ್ಲಿ, ವಿಶೇಷವಾಗಿ ಕನ್ನಡದ ಗಂಡು ನೆಲದಲ್ಲಿ ಮೆಟ್ಟುನಿಂತು ಜಯಭೇರಿ ಆಚರಿಸುತ್ತಿರುವ 98 ವರ್ಷಗಳ ಜೀವಂತ ಮರಿಗಳ ಹಿಂಡು ಇದೆಯಂಬುದು ಹೆಮ್ಮೆಯ ವಿಷಯವಾಗಿದೆ.

ಇದೇ ಸುಸಂದರ್ಭದಲ್ಲಿ ಕಾಕತಾಳೀಯವೋ ಎಂಬಂತೆ, ದೂರದೃಷ್ಟಿಯುಳ್ಳ ಇಂದಿನ ರಾಜ್ಯ ಪ್ರಧಾನ ಆಯುಕ್ತರಾವ ಶ್ರೀ ಪಿ.ಜಿ. ಆರ್. ಸಿಂಧ್ಯ ಅವರ ನಾಯಕತ್ವದಲ್ಲಿ ಮೈಸೂರುರಾಜ ಮನೆತನದ ಕೇಂದ್ರವಾದ ವಿಶ್ವವಿಖ್ಯಾತ ಮೈಸೂರಿನಲ್ಲಿ 17ನೇ ರಾಷ್ಟ್ರೀಯ ಸ್ಕೌಟ್ – ಗೈಡ್ ಜಾಂಬೂರಿ ಆಯೋಜಿತವಾಗಿರುವುದು, ಅದರ ಅಂಗವಾಗಿ "ಮರಿಗಳ ಕೂಟ" ಸೇರಲಿರುವುದೂ. ಮರಿಗಳ ಶಿಕ್ಷಣ ನೆಲೆಗಟ್ಟು ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ

**ಸಚಿತ್ರ ಸವಿವರ ಪುಸ್ತಕವು**

"ಕಾಡಿನ ಕತೆಗಳು" ಪುಸ್ತಕವು ಪ್ರಬಂಧರೂಪದಲ್ಲಿ ಕನ್ನಡದಲ್ಲಿ ಹೊರಬರಲಿರುವುದು. ಮುಂಬರುವ ಭವ್ಯ ದಿನಗಳ ಬಗ್ಗೆ ನಾಂದಿ ಹಾಡಲಿದೆ.

**ವನವೇ, ಜಲವೇ ವಾಯುವೇ, ತರುವೇ**
**ಕನ್ನಡಕಂದರನ್ನು ಕಾಪಾಡಿ ।**
**ಕಾಡಿನೊಲುಮೆ ಸದಾ ಇರಲಿ। ದೇಹಬಲ, ವಿವೇಕ, ವಿನಯಗಳು ಕೊಡಲಿ**
**ಕಾಡಿನೊಲುಮೆ ಸದಾ ನಮ್ಮನ್ನು ಪೊರೆಯಲಿ ॥**

# ಜಿಲ್ಲಾ ವಾರ್ತೆಗಳು

## ಬಳ್ಳಾರಿ



ದಿನಾಂಕ 20 ರಿಂದ 21 ಸೆಪ್ಟೆಂಬರ್ 2016ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ಹಮ್ಮಿಕೊಂಡಿದ್ದ ತಾಲೂಕು ಮಟ್ಟದ "ಪ್ರತಿಭಾಕಾರಂಜಿ" ಕಾರ್ಯಕ್ರಮವನ್ನು ಸಿರುಗುಪ್ಪ ನಗರದ ರಾಜೀವಗಾಂಧಿ ಮೆಮೋರಿಯಲ್ ಆಂಗ್ಲಮಾಧ್ಯಮ ಶಾಲೆಯಲ್ಲಿ ಆಯೋಜಿಸಲಾಗಿತ್ತು. ಎರಡು ದಿನಗಳ ಕಾರ್ಯಕ್ರಮದಲ್ಲಿ ವಿಶ್ವೇಶ್ವರಯ್ಯ ವಿದ್ಯಾಮಂದಿರ ಪ್ರೌಢಶಾಲೆಯ ವಿಶ್ವೇಶ್ವರಯ್ಯ ಸ್ಕೌಟ್ ಗ್ರೂಪ್ ನಂ. 312ರ 32 ಮಕ್ಕಳು ಸ್ವಯಂ ಸೇವಕರಾಗಿ ಭಾಗವಹಿಸಿದ್ದರು.

## ಬೆಂಗಳೂರು ದಕ್ಷಿಣ

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಡುಗೋಡಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಕೋಮುಸೌಹಾರ್ದ ಪಾಕ್ಷಿಕ ಹಾಗು ಸದ್ಭಾವನಾ ದಿನಾಚರಣೆಯನ್ನು ಆಚರಿಸಲಾಯಿತು.




ದಿನಾಂಕ 01-09-2016 ರಂದು ಗುರುವಾರ 11 ಗಂಟೆಗೆ ಪ್ರಾಂಶುಪಾಲರು ಹಾಗೂ ಎಲ್ಲಾ ಬೋಧಕ, ಬೋಧಕೇತರರ ವಿದ್ಯಾರ್ಥಿಗಳ ಸಮ್ಮುಖದಲ್ಲಿ ರೇಂಜರ್ ಲೀಡರ್ ಶ್ರೀಮತಿ ಎಸ್.ಎನ್. ಭಾರತಿ ಮತ್ತು ರೋವರ್ ಲೀಡರ್ ಶ್ರೀ ಕೆ.ವಿ.ಕೃಷ್ಣಕುಮಾರ್ ಮತ್ತು ಎಲ್ಲ ರೇಂಜರ್ಸ್ ಮತ್ತು ರೋವರ್ಸ್‌ಗಳೊಂದಿಗೆ "ಸರ್ವಧರ್ಮ ಪ್ರಾರ್ಥನೆ"ಯನ್ನು ನಡೆಸಲಾಯಿತು. ಕಾರ್ಯಕ್ರಮದ ಕೊನೆಯಲ್ಲಿ ರೇಂಜರ್ ಲೀಡರ್ ಶ್ರೀಮತಿ ಎಸ್.ಎನ್. ಭಾರತಿ ರವರು ಸದ್ಭಾವನೆಯ ಪ್ರತಿಜ್ಞಾವಿಧಿಯನ್ನು ಬೋಧಿಸಿದರು.

ದಿನಾಂಕ 03-09-2016 ರಂದು 12.30ಕ್ಕೆ "ಕೋಮುಸೌಹಾರ್ದತೆ ಮತ್ತು ಸದ್ಭಾವನೆ" ವಿಷಯದ ಬಗ್ಗೆ ಭಾಷಣ ಕಾರ್ಯಕ್ರಮವನ್ನು ನಡೆಸಲಾಯಿತು. ಎಲ್ಲಾ ರೇಂಜರ್ಸ್, ರೋವರ್ಸ್ ಇತರೆ ವಿದ್ಯಾರ್ಥಿಗಳು ಮತ್ತು ಭೋದಕ ಭೋದಕೇತರರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಪ್ರಾಂಶುಪಾಲರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದು, ಶ್ರೀಮತಿ ಜಿ.ಕೆ. ಕರಿಯಮ್ಮ ರವರು ಇತಿಹಾಸ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು ಇವರು "ಕೋಮುಸೌಹಾರ್ದತೆ ಮತ್ತು ಸದ್ಭಾವನೆ" ವಿಷಯದ ಬಗ್ಗೆ ಸುದೀರ್ಘವಾಗಿ ಮಾತನಾಡಿ ರೇಂಜರ್ಸ್-ರೋವರ್ಸ್‌ಗಳಿಗೆ ಹಲವಾರು ಮಾಹಿತಿಯನ್ನು ನೀಡಿದರು. ಪ್ರಾಂಶುಪಾಲರಾದ ಡಾ॥ ಬಿ. ಚಂದ್ರಶೇಖರ್ ರವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ಕೊನೆಯಲ್ಲಿ ರೇಂಜರ್ ಲೀಡರ್ ಶ್ರೀಮತಿ ಭಾರತಿ ಎಸ್.ಎನ್. ರವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.



## Bengaluru North

JOTA AND JOTI-2016, was a two days feature at Sri Chamundi Scout Group, Malleswaram, Bengaluru North District, Programme started at 0900 hours on the 15th instant. The First event was held at Turahalli and the second session was at the Group premises only. First day the Station was functioning up to 0300 Hrs. (16th Oct.) Following Countries were contacted and exchanged the greetings. JOTA: Sri Lank, Bangladesh, Nepal, Hongkong, Australia & within India, Pachmarhi, Gadag, Tumkur, Kolar, Bengaluru Headquarter. Chennai, Paramakudi, Palakelle.

JOTI : South Africa, Norway, Pakistan, U.S.A, Australia, Indonesia, Cyprus, Mexico, Singapore, Taiwan, Netherlands, Malaysia, Europe, Chile, Gautemala, Finland, Neland, Sweden, Columbia, Great Britain, Phillipines, Tahati, Italy, Turkey, Greece, Spain, England, France, Malta, India, Serbia, Ireland, Germany, Bangladesh, Namiabia, Zimbawe, Japan, Oman and Russia.

State Chief Commissioner Mr. P.G.R. Sindhia was kind enough to be with the group and participated in the event and blessed the Scouts-Guides. He also had interaction with group members.

* On October 2nd the Shivajinagar Local Association Organised Blood Donation Camp in St. Anthony's Boys School. Francies X'vier Church Compound Promenade Road. Bengaluru. All Faiths Prayer was also conducted. The camp was organised Miss. Krupa Vijai, secretary Mr. Venkatesh, Vice President, Mrs. Manjula Rathodia, Vice President of Shivajinagar Local Association were the Chief Guests.



## ಚಿತ್ರದುರ್ಗ

ದಿನಾಂಕ 21-09-2016 ರಂದು ಜಿಲ್ಲಾ ಮಟ್ಟದ "ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶ" ಹಾಗೂ "ವಿಶ್ವಶಾಂತಿ ದಿನಾಚರಣೆ" ಕಾರ್ಯಕ್ರಮದ ಉದ್ಘಾಟನೆಯನ್ನು ಮಾನ್ಯ ಶ್ರೀ ಎಂ. ರೇವಣಸಿದ್ದಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಚಿತ್ರದುರ್ಗ, ಇವರು ನೆರವೇರಿಸಿ ಹಿಮಾಲಯ ವೃಕ್ಷಮಣಿಧಾರಕರು ಸ್ಥಳೀಯ ಸಂಸ್ಥೆಗಳ ಬೆಳವಣಿಗೆಗೆ ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಂಡು, ಉತ್ತಮವಾದ ಕಾರ್ಯಕ್ರಮಗಳನ್ನು ಆಯೋಜಿಸಿಕೊಂಡು ಮೂಲ ಮತ್ತು ಮುಂದುವರೆದ ತರಬೇತಿ ಪಡೆದಂತಹ ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್ಸ್, ಫ್ಲಾಕ್ ಲೀಡರ್, ಗೈಡ್ಸ್ ಕ್ಯಾಪ್ಟನ್‌ಗಳಿಗೆ ಮಾರ್ಗದರ್ಶನವನ್ನು ನೀಡಿ ಸಂಸ್ಥೆಯ ಬೆಳವಣಿಗೆಗೆ ಸಹಕಾರಿಗಳಾಗಬೇಕೆಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ ಶ್ರೀ ಪಿ.ಎಲ್. ಸುರೇಶ್‌ರಾಜು, ಜಿಲ್ಲಾ ಆಯುಕ್ತರು(ಸ್ಕೌ) ಮಾತನಾಡಿ ಬೆಳವಣಿಗೆಗೆ ತಾವೆಲ್ಲಾ ಸಹಕಾರಿಯಾಗಿ ಕಾರ್ಯನಿರ್ವಹಿಸಬೇಕೆಂದು ತಿಳಿಸಿದರು. ಜಿಲ್ಲಾ ಕಾರ್ಯದರ್ಶಿಯವರಾದ ಶ್ರೀ ಬಿ.ಎ. ಲಿಂಗಾರೆಡ್ಡಿ ರವರು ತಾವುಗಳು ತಮ್ಮ ಅನುಭವದಿಂದ ಸ್ಕೌಟ್ಸ್-ಗೈಡ್ಸ್‌ಗಳ ಅಭ್ಯುದಯಕ್ಕೆ ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳ ತರಬೇತಿಗಳಿಗೆ ಸಹಕಾರಿಗಳಾಗಬೇಕೆಂದು ತಿಳಿಸಿದರು. ಶ್ರೀಮತಿ ಶಶಿಕಲ ರವಿಶಂಕರ್ ರವರು ತಾವೆಲ್ಲಾ ಸಹಕಾರ ನೀಡಿಕೊಂಡು ಜಿಲ್ಲೆಯನ್ನು ರಾಜ್ಯ, ರಾಷ್ಟ್ರಮಟ್ಟದಲ್ಲಿ ಬೆಳವಣಿಗೆಗೆ ಸಹಕರಿಸಬೇಕೆಂದು ಹೇಳಿದರು. ಶ್ರೀಮತಿ ನಾಗಲತಾ ರವರು ವಿಶ್ವಶಾಂತಿ ದಿನಾಚರಣೆ ಅಂಗವಾಗಿ ಸಂದೇಶವನ್ನು ಹೇಳಿದರು. ಶ್ರೀಮತಿ ರೀನಾ ವೀರಭದ್ರಪ್ಪ ರವರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ಟಿ. ಕರಿಸಿದ್ದಪ್ಪ, ಡಿ.ಓ., ರವರು ನಿರೂಪಿಸಿದರು. ಶ್ರೀ ಗುರುಮೂರ್ತಿ, ಡಿ.ಓ. ರವರು ವಂದನೆ ಸಲ್ಲಿಸಿದರು. ಈ ಕಾರ್ಯಕ್ರಮದಲ್ಲಿ 30 ಹಿಮಾಲಯ ವೃಕ್ಷಮಣಿದಾರಕರು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಶ್ರೀಮತಿ ಸುಜಯಾ ಪ್ರಕಾಶ್, ಉಪಾಧ್ಯಕ್ಷರು, ಶ್ರೀ ಜಯಶೀಲಾ ಮಹೇಶ್ವರಪ್ಪ, ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀಮತಿ ಸಿ.ಪಿ. ಸುಶೀಲಮ್ಮ, ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಶ್ರೀ ವೈ.ಬಿ. ಮಹೇಂದ್ರನಾಥ, ಜಿಲ್ಲಾ ಸಹ ಕಾರ್ಯದರ್ಶಿ, ಶ್ರೀ ಸಿ. ಆರ್. ಮೊಹಿನುದ್ದೀನ್ ಎ.ಡಿ.ಸಿ.(ಎಸ್) ಶ್ರೀ ಯರ‍್ರಿಸ್ವಾಮಿ, ಹೆಚ್.ಕ್ಯೂ.ಸಿ.(ಎಸ್.) ಶ್ರೀ ಮಹೇಶ್ ಡಿ.ಟಿ.ಸಿ.,(ಸ್ಕೌಟ್ಸ್) ಎಲ್ಲಾ ಪದಾಧಿಕಾರಿಗಳು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಭಾಗವಹಿಸಿದ್ದರು.



* ದಿನಾಂಕ 02-10-2016 ರಂದು ಮಹಾತ್ಮಾಗಾಂಧೀಜಿಯವರ ಭಾವಚಿತ್ರಕ್ಕೆ ಪೂಜಿ ಸಲ್ಲಿಸುವುದರೊಂದಿಗೆ 147ನೇ ಜನ್ಮ ದಿನಾಚರಣೆಯನ್ನು ಹಾಗೂ ಸರ್ವಧರ್ಮ ಪ್ರಾರ್ಥನೆಯನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಚಿತ್ರದುರ್ಗ ಇವರ ಸಹಯೋಗದೊಂದಿಗೆ ಆಚರಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಪಿ.ಎಲ್. ಸುರೇಶರಾಜು ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಜಯಶೀಲಾ ಮಹೇಶ್ವರಪ್ಪ, ಜಿಲ್ಲಾ ಗೈಡ್ಸ್ ಆಯುಕ್ತರು, ಗಾಂಧೀಜಿಯವರ ತ್ಯಾಗಮಯ ಜೀವನದ ಬಗ್ಗೆ ಹಾಗೂ ದೇಶಕ್ಕೆ ಸ್ವಾತಂತ್ರ್ಯವನ್ನು ಸತ್ಯ, ಶಾಂತಿ, ಅಹಿಂಸೆಯಿಂದ ತಂದುಕೊಟ್ಟ ದಿಗ್ವಿಜಯದ ಮಹಾತ್ಕಾರ್ಯಗಳ ಕುರಿತು ಹೇಳಿದರು. ಶ್ರೀ ಯರ‍್ರಿಸ್ವಾಮಿಯವರು ಗಾಂಧೀಜಿಯವರ ಬಾಲ್ಯಜೀವನದ ಸತ್ಯ ಘಟನೆಗಳ ದೃಷ್ಟಾಂತಗಳನ್ನು ಹೇಳಿದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಸುಜಯಾ ಪ್ರಕಾಶ್, ಉಪಾಧ್ಯಕ್ಷರು ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಚಿಕ್ಕಮಗಳೂರು

ದಿನಾಂಕ 02-10-2016 ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ವತಿಯಿಂದ ಜಿಲ್ಲಾ ಸ್ಕೌಟ್ಸ್ ಭವನದಲ್ಲಿ 147ನೇ ಗಾಂಧಿ ಜಯಂತಿ ಹಾಗೂ ಸ್ವಚ್ಛತಾ ಕಾರ್ಯಕ್ರಮ ಆಯೋಜಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಸರ್ವಧರ್ಮ ಪ್ರಾರ್ಥನೆ ಹಾಗೂ ಸುಭಾಷ್‌ಚಂದ್ರ ಭೋಸ್ ಆಟದ ಮೈದಾನ ಸ್ವಚ್ಛಗೊಳಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ, ಜಿಲ್ಲಾ ಸ್ಕೌಟ್ಸ್ ಆಯುಕ್ತ, ಶ್ರೀ ಎ.ಎನ್. ಮಹೇಶ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಸಂಧ್ಯಾರಾಣಿ, ಹಿರಿಯ ಸ್ಕೌಟರ್ ಶ್ರೀ ನೀಲಕಂಠಾಚಾರ್, ಜಿಲ್ಲಾ ಸಂಘಟಕ ಶ್ರೀ ಕಿರಣ್ ಕುಮಾರ್, ಸಹಾಯಕ ಆಯಕ್ತರಾದ ಶ್ರೀಮತಿ ಭಾರತಿ ಶಿವರುದ್ರಪ್ಪ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನಂದಕುಮಾರ್ ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

ತೃತೀಯ ಚರಣ್, ಸುವರ್ಣಗಿರಿ ಮತ್ತು ತೃತೀಯ ಸೋಪಾನ್ ಪರೀಕ್ಷಾ ಶಿಬಿರಗಳನ್ನು ಆಗಸ್ಟ್ ತಿಂಗಳಿನ ವಿವಿದ ದಿನಾಂಕಗಳಂದು ನಡೆಸಲಾಯಿತು.

ದಿನಾಂಕ 15-08-2016 ರಂದು ಸ್ವಾತಂತ್ರ್ಯೋತ್ಸವ ದಿನಾಚರಣೆಯನ್ನು ಜಿಲ್ಲಾ ಭವನದ ಆವರಣದಲ್ಲಿ ಆಚರಿಸಲಾಯಿತು. ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕೋಶಾಧಿಕಾರಿಗಳು ಧ್ವಜ ಅರಳಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ವಿವಿಧ ಸಸಿಗಳನ್ನು ನೆಟ್ಟು ವನಮಹೋತ್ಸವ ಆಚರಿಸಲಾಯಿತು.

* ದಿನಾಂಕ 20-08-2016 ರಂದು ಮಾಜಿ ಪ್ರಧಾನಿ ದಿ॥ ರಾಜೀವ ಗಾಂಧಿಯವರ 72ನೇ ಜನ್ಮ ದಿನವನ್ನು ಸದ್ಭಾವನಾ ದಿನವನ್ನಾಗಿ ಭಾರತ್ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು ದೀಪ ಬೆಳಗಿಸಿ ಉದ್ಘಾಟಿಸಿದ ಬಳಿಕ ಸರ್ವಧರ್ಮ ಪ್ರಾರ್ಥನೆಯನ್ನು ಶ್ರೀಮತಿ ಜಯಶ್ರೀ ಎ.ಎಲ್.ಟಿ.(ಗೈ) ಇವರ ಮುಂದಾಳತ್ವದಲ್ಲಿ ನಡೆಸಲಾಯಿತು. ಸುಮಾರು 12 ಶಾಲೆಗಳ 145 ಸ್ಕೌಟ್ಸ್-ಗೈಡ್ಸ್‌ಗಳು ಪರಿಸರ ಜಾಗೃತಿಯ ಘೋಷಣೆ ಮೂಲಕ, ಸಾರ್ವಜನಿಕರಲ್ಲಿ ಪರಿಸರ ಸ್ವಚ್ಛತೆಯ ಮಹತ್ವವನ್ನು ತಿಳಿಸಿದರು. ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತರು ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ಐರಿನ್ ಡಿ'ಕುನ್ಹ ಜಿಲ್ಲಾ ಗೈಡ್ ಆಯುಕ್ತರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಎಂ. ಸುನೀತ ಜಿಲ್ಲಾ ಸಂಸ್ಥೆಯ ಮ್ಯಾನೇಜರ್ ಶ್ರೀ ಭಾಸ್ಕರ ವೇದಿಕೆಯಲ್ಲಿ ಉಪಸ್ಥಿತರಿದ್ದರು.



ಶ್ರೀಮತಿ ಎಂ. ಸುನೀತಾ ಡಿಟಿಸಿ.(ಗೈಡ್ಸ್) ಸದ್ಭಾವನಾ ದಿನಾಚರಣೆಯ ಪ್ರತಿಜ್ಞಾವಿಧಿಯನ್ನು ಬೋಧಿಸಿದರು. 2015-16ನೇ ಸಾಲಿನಲ್ಲಿ ಚತುರ್ಥಚರಣ (ಕಬ್ಸ್), ಹೀರಖ್‌ಗರಿ (ಬುಲ್‌ಬುಲ್ಸ್) ಗೋಲ್ಡನ್ ಆ್ಯರೋ (ಕಬ್ಸ್-ಬುಲ್‌ಬುಲ್ಸ್) ರಾಜ್ಯ ಪುರಸ್ಕಾರ-ರಾಷ್ಟ್ರಪತಿ ಪುರಸ್ಕಾರ (ಸ್ಕೌಟ್ಸ್-ಗೈಡ್ಸ್) ಪಡೆದ ಮಕ್ಕಳಿಗೆ ಪ್ರಶಸ್ತಿ ಪತ್ರ ವಿತರಿಸಲಾಯಿತು. ಸದ್ಭಾವನಾ ದಿನಾಚರಣೆಯ ಪೂರ್ವ ನಡೆಸಿದ ದೇಶಭಕ್ತಿ ಗೀತೆ, ಚಿತ್ರಕಲಾ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಹಾಗೂ 2016 ಜುಲೈ 28 ರಿಂದ ಆಗಸ್ಟ್ 4ರ ವರೆಗೆ ಲಂಡನ್‌ನಲ್ಲಿ ನಡೆದ 8ನೇ ಅಂತರರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಿದ ಶಾರದಾ ವಿದ್ಯಾಲಯದ 23 ಮಕ್ಕಳು. ಸ್ಕೌಟ್ ಮಾಸ್ಟರ್ ಶ್ರೀ ದಿನೇಶ್ ಮತ್ತು ಇಂದ್ರಪ್ರಸ್ಥ ವಿದ್ಯಾಲಯದ 5 ಸ್ಕೌಟ್-ಗೈಡ್‌ಗಳು, ಲೇಡಿ ಸ್ಕೌಟ್ ಮಾಸ್ಟರ್ ಬ್ಲೆಂಡಿನ್ ರೋಡ್ರಿಗಸ್ ರವರನ್ನು ನೆನಪಿನ ಕಾಣಿಕೆ, ಪುಷ್ಪ ನೀಡಿ ಗೌರವಿಸಲಾಯಿತು.

ಶ್ರೀ ಎನ್.ಜಿ. ಮೋಹನ್ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಪ್ರಶಸ್ತಿಯನ್ನು ಪಡೆದವರಿಗೆ, ವಿದೇಶಿ ಪ್ರವಾಸ ಕೈಗೊಂಡು ಬಂದಿರುವ ಮಕ್ಕಳು-ಶಿಕ್ಷಕರಿಗೆ ಮತ್ತು ಪ್ರತಿಭಾವಂತ ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್‌ಗಳಿಗೂ ಹಾಗೂ ಅವರನ್ನು ತರಬೇತುಗೊಳಿಸಿದ ಶಿಕ್ಷಕವೃಂದದವರಿಗೆ ಕೃತಜ್ಞತೆಯನ್ನು ಅರ್ಪಿಸಿದರು. ಜಿಲ್ಲಾ ಸಂಘಟನಾ ಆಯುಕ್ತೆ ಶ್ರೀಮತಿ ಎಸ್. ಚಂದ್ರಕಲಾ ಮತ್ತು ಜಿಲ್ಲಾ ಸಂಘಟಕ ಶ್ರೀ ಕೆ. ಭರತ್‌ರಾಜ್ ಇವರುಗಳ ಸಹಯೋಗದೊಂದಿಗೆ ಕಾರ್ಯಕ್ರಮವನ್ನು ಸಂಘಟಿಸಿದರು.

* ದಿನಾಂಕ 27-08-2016 ರಿಂದ 28-08-2016 ರ ವರೆಗೆ ವಿವೇಕಾನಂದ ಪ್ರಥಮದರ್ಜೆ ಕಾಲೇಜ್ ಪುತ್ತೂರಿನಲ್ಲಿ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರ ನಡೆಯಿತು. ಶಿಬಿರದಲ್ಲಿ 47 ರೋವರ್ಸ್ ಹಾಗು 47 ರೇಂಜರ್ಸ್ ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ರೋವರ್ಸ್ ವಿಭಾಗದಲ್ಲಿ ಶ್ರೀ ಈಶ್ವರಪ್ರಸಾದ್ (ಆರ್.ಎಸ್.ಎಲ್) ಹಾಗೂ ರೇಂಜರ್ಸ್ ವಿಭಾಗದಲ್ಲಿ ಕುಮಾರಿ ದಿವ್ಯಾ (ಆರ್.ಎಲ್.) ರವರು ನೇತೃತ್ವ ವಹಿಸಿದ್ದರು.

* ದಿನಾಂಕ 16-08-2016 ರಂದು ಶ್ರೀ ರಾಮಕೃಷ್ಣ ಪ್ರೌಢಶಾಲೆ ವತಿಯಿಂದ "ಸ್ವಚ್ಛತೆಗೆ ಸಹಕಾರ ಪುತ್ತೂರಿಗೆ ಉಪಕಾರ" ಎಂಬ ಜಾಥಾವನ್ನು ನಡೆಸಲಾಯಿತು. ಶ್ರೀ ರಾಮಕೃಷ್ಣ ಪ್ರೌಢಶಾಲೆಯ ಆಟದ ಮೈದಾನದಲ್ಲಿ ಸ್ಥಳೀಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ವಿದ್ಯಾ ಆರ್. ಗೌರಿಯವರು ಈ ಜಾಥಾವನ್ನು ಹಸಿರು ಬಾವುಟ ಹಾರಿಸುವುದರ ಮೂಲಕ ಉದ್ಘಾಟಿಸಿದರು.

* ದಿನಾಂಕ 21-08-2016 ರಂದು ಪುತ್ತೂರು ಶ್ರೀ ರಾಮಕೃಷ್ಣ ಪ್ರೌಢಶಾಲೆಯಿಂದ ಬಂಟ್ವಾಳ ಶ್ರೀ ಮಹಾತೋಭಾರ ಶ್ರೀ ಕಾರಿಂಜೇಶ್ವರ ದೇವಸ್ಥಾನಕ್ಕೆ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಚಾರಣ ಹಮ್ಮಿಕೊಳ್ಳಲಾಗಿತ್ತು.

* ದಿನಾಂಕ 20-08-2016 ರಿಂದ 22-08-2016 ರ ವರೆಗೆ ಮೂಡಬಿದ್ರೆ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್ಸ್ ಪಟಾಲಂ ನಾಯಕರ ತರಬೇತಿ ಶಿಬಿರವು ಎಂ.ಕೆ. ಶೆಟ್ಟಿ ಸೆಂಟ್ರಲ್‌ಸ್ಕೂಲ್, ಕಲ್ಲಬೆಟ್ಟು, ಮೂಡಬಿದ್ರೆಯಲ್ಲಿ ಜರುಗಿತು. ಎಂ.ಕೆ. ಶೆಟ್ಟಿ ಸೆಂಟ್ರಲ್ ಸ್ಕೂಲ್‌ನ ಚೇರ್ಮನ್ ಶ್ರೀ ಸುಭಾಶ್ಚಂದ್ರ ಶೆಟ್ಟಿಯವರು ಶಿಬಿರದ ಉದ್ಘಾಟನೆಯನ್ನು ದೀಪ ಪ್ರಜ್ವಲನದ ಮೂಲಕ ನೆರವೇರಿಸಿದರು. ಅಧ್ಯಕ್ಷ ಸ್ಥಾನವನ್ನು ಸ್ಥಳೀಯ ಸಂಸ್ಥೆಯ ಸಹ ಕಾರ್ಯದರ್ಶಿ, ದೈಹಿಕ ಶಿಕ್ಷಕ ಸಂಘದ ಅಧ್ಯಕ್ಷರಾದ ಶ್ರೀ ನವೀನ್‌ಚಂದ್ರ ಅಂಬೂರಿಯವರು ವಹಿಸಿದ್ದರು. ಸಂಸ್ಥೆಯ ಪ್ರಾಂಶುಪಾಲರಾದ ಶ್ರೀಮತಿ ನಿಶ್ಮಿತಾ, ಶಿಬಿರದ ನಾಯಕಿಯರಾದ ಶ್ರೀಮತಿ ಮಂಜುಳಾ ಉಪಸ್ಥಿತರಿದ್ದು ಕಾರ್ಯದರ್ಶಿ ಶ್ರೀ ವಿ.ಎ. ಕೃಷ್ಣಮೂರ್ತಿ ಸ್ವಾಗತಿಸಿದರು. ಶ್ರೀಮತಿ ಜಯಶ್ರೀಯವರು ಕಾರ್ಯಕ್ರಮ ಸಂಯೋಜಿಸಿದರು, ಶ್ರೀಮತಿ ವಿ. ಸುಮಂಗಲ ಇವರು ವಂದನಾರ್ಪಣೆಗೈದರು.

* ದಿನಾಂಕ 08-09-2016 ರಂದು ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆ, ಬೆಳ್ತಂಗಡಿಯ ಬುಲ್‌ಬುಲ್‌ಗಳು ಆರಕ್ಷಕ ಠಾಣೆಗೆ ಭೇಟಿ ನೀಡಿದರು. ಸಿಬ್ಬಂದಿ ವರ್ಗವು ಬುಲ್‌ಬುಲ್‌ಗಳನ್ನು ಆತ್ಮೀಯವಾಗಿ ಸ್ವಾಗತಿಸಿದರು. ಠಾಣೆಯ ಪರಿಚಯವನ್ನು ಸಬ್ ಇನ್ಸ್‌ಪೆಕ್ಟರ್ ಶ್ರಿ ರವಿ ಬಿ. ಎಸ್. ರವರು ಮಾಡಿಕೊಟ್ಟರು. ಪೋಲಿಸ್ ಠಾಣೆಯಲ್ಲಿರುವ ಗನ್, ವಯರ್‌ಲೆಸ್‌ಫೋನ್, ಸಿಗ್ನಲ್, ರಸ್ತೆ ನಿಯಮದ ಬಗ್ಗೆ ಸತತ ಒಂದು ಗಂಟೆಯ ಮಾಹಿತಿಯನ್ನು ನೀಡಿದರು. ಬುಲ್‌ಬುಲ್‌ಗಳ ಪ್ರಶ್ನೆಗಳಿಗೆ ಉತ್ತರಿಸಿದರು. ಸರ್ಕಲ್ ಇನ್ಸ್‌ಪೆಕ್ಟರ್ ಶ್ರೀ ನೇಮಿರಾಜ್, ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಹೇಮಲತಾ ಎಂ.ಆರ್. ದೈಹಿಕ ಶಿಕ್ಷಕ ಶ್ರೀ ಗಣೇಶ್, ಪೋಲಿಸ್ ಇಲಾಖೆಯ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು. ಫ್ಲಾಕ್ ಲೀಡರ್ ಪ್ರಮೀಳಾರವರು ಕಾರ್ಯಕ್ರಮವನ್ರನು ನಿರ್ವಹಿಸಿದರು.

* ದಿನಾಂಕ 10-09-2016 ರಿಂದ 11-09-2016 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ಚತುರ್ಥ ಚರಣ ಮತ್ತು ಹೀರಖ್ ಗರಿ ಪರೀಕ್ಷಾ ಶಿಬಿರವನ್ನು ಸಂಘಟಿಸಲಾಗಿತ್ತು. ಪರೀಕ್ಷಾ ಶಿಬಿರದಲ್ಲಿ 154 ಬುಲ್‌ಬುಲ್ಸ್, 20 ಫ್ಲಾಕ್ ಲೀಡರ್ಸ್, 135 ಕಬ್ಸ್ ಮತ್ತು 15 ಕಬ್ ಮಾಸ್ಟರ್‌ಗಳು ಭಾಗವಹಿಸಿದ್ದರು. ಕಬ್ ವಿಭಾಗಕ್ಕೆ ಶ್ರೀ ಮೋಹನ್ ಕುಮಾರ್ ಎ.ಎಲ್.ಟಿ.(ಕಬ್) ಮತ್ತು ಬುಲ್‌ಬುಲ್ ವಿಭಾಗಕ್ಕೆ ಶ್ರೀಮತಿ ವಿಮಲಾಬಾಯಿ ಎ.ಎಲ್.ಟಿ.(ಬು) ಇವರುಗಳು ನಾಯಕರಾಗಿ ಸಹಕರಿಸಿದರು.

* ದಿನಾಂಕ 03-09-2016 ರಿಂದ 09-09-2016 ಬಾಳಿಲ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ರಸ್ತೆಯುದ್ದಕ್ಕೂ ಸುಮಾರು 2 ಕಿ.ಮೀ. ಸಂಚರಿಸಿ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ವಿಲೇವಾರಿ ಮಾಡಿ. ಸುತ್ತಮುತ್ತಲಿನ ಜನರಿಗೆ ಇದರ ಅರಿವು ಮುಡಿಸುವ ಜಾಗೃತಿ ಕಾರ್ಯಕ್ರಮವನ್ನು ಗ್ರಾಮಪಂಚಾಯತ್‌ನ ಸಹಯೋಗದೊಂದಿಗೆ ಬಾಳಿಲದ ಸ್ಕೌಟ್ಸ್-ಗೈಡ್ಸ್‌ಗಳು ಹಮ್ಮಿಕೊಂಡರು. 2 ತಾಸುಗಳ ಈ ಸ್ವಚ್ಛತಾ ಕಾರ್ಯದಲ್ಲಿ ವಿದ್ಯಾಬೋಧಿನಿ ಪ್ರೌಢಶಾಲೆಯ 16 ಸ್ಕೌಟ್ಸ್, 19 ಗೈಡ್ಸ್‌ಗಳು ಹಾಗೂ ಶಾಲೆಯ 26 ಇತರ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಗ್ರಾಮಪಂಚಾಯತ್ ಅಧ್ಯಕ್ಷರಾದ ಶ್ರೀ ಕೃಷ್ಣಪ್ಪ, ಬಾಳಿಲ ಪ್ರೌಢಶಾಲೆಯ ಮುಖ್ಯ ಗುರು ಶ್ರೀ ಎಂ.ಎಸ್. ಶಿವರಾಮ ಶಾಸ್ತ್ರಿ, ಪಿಡಿಒ ಶ್ರೀಮತಿ ಚಂದ್ರಕಲಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಸ್ಕೌಟ್ಸ್-ಗೈಡ್ಸ್‌ಗಳು ಹಮ್ಮಿಕೊಂಡ ಕಾರ್ಯದಲ್ಲಿ ಕೈ ಜೋಡಿಸಿದರು. ಶಾಲಾ ಸ್ಕೌಟ್ ಶಿಕ್ಷಕ ಶ್ರೀ ಉದಯಕುಮಾರ್ ರೈ ಮತ್ತು ಗೈಡ್ ಶಿಕ್ಷಕಿ ಸಹನಾ ಬಿ.ಬಿ. ಸ್ವಚ್ಛತಾ ಕಾರ್ಯಕ್ರಮವನ್ನು ಸಂಘಟಿಸಿದರು.

* ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಪಂಜ ಶ್ರೀ ಪಂಚಲಿಂಗೇಶ್ವರ ದೇವಾಲಯದ ವಠಾರವನ್ನು ಪ್ರತೀ ಶುಕ್ರವಾರ ಶುಚಿಗೊಳಿಸುವ ಕಾರ್ಯವನ್ನು ಹಮ್ಮಿಕೊಂಡಿದ್ದರು. ಈ ಕಾರ್ಯದಲ್ಲಿ 14 ಸ್ಕೌಟ್ಸ್, 8

ಗೈಡ್ಸ್, ಮತ್ತು 29 ಮಂದಿ ಶಾಲೆಯ ಇತರ ವಿದ್ಯಾರ್ಥಿಗಳು ಭಾಗವಹಿಸಿದ್ದಾರೆ. ಸ್ಕೌಟರ್ ವೇದಾವತಿ ನಾಗತೀರ್ಥ ಸಂಘಟಿಸಿದ ಈ ಕಾರ್ಯಕ್ರಮದಲ್ಲಿ ಮುಖ್ಯ ಶಿಕ್ಷಕಿ ಹಾಗೂ ದೇವಳದ ಆಡಳಿತ ವಿಭಾಗದವರು ಸಹಕರಿಸಿದರು.

* ಬುರೂಜ್ ಆಂಗ್ಲ ಮಾಧ್ಯಮ ಶಾಲೆ, ರಝಾ ನಗರಲ್ಲಿ ಗಾಂಧೀ ಜಯಂತಿ ಆಚರಿಸಲಾಯಿತು. ಸ್ಕೌಟ್ಸ್-ಗೈಡ್ಸ್‌ಗಳಿಂದ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಗಾಂಧೀಜಿಯ ಭಾವಚಿತ್ರಕ್ಕೆ ಮುಖ್ಯಶಿಕ್ಷಕರು ಹೂ ಮಾಲೆ ಅರ್ಪಿಸಿದರು. ಶಿಕ್ಷಕರಾದ ಜಾರ್ಜ್ ಕೆ. ಎಫ್. ಶೋಭಾ ಡಿ ಮತ್ತು ಶ್ರೀಮತಿ ರಝೀಯಾ ಗಾಂಧೀಜಿಯ ಜೀವನದ ಮೇಲೆ ಬೆಳಕು ಚೆಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಗಾಂಧಿ ಜಯಂತಿಯ ಮಹತ್ವವನ್ನು ಹೇಳಿದರು. ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ಭಾವಗೀತೆ, ಭಾಷಣ, ಸಮೂಹಗೀತೆ ಮತ್ತು ವಿಚಾರಮಂಡನೆ ನಡೆಯಿತು. ಶಾಲಾ ವಠಾರ ಮತ್ತು ಶಾಲೆಯಿಂದ ಕಲಾಬಾಗಿಲಿನ ವರೆಗೆ ಮಾರ್ಗದ ಎರಡೂ ಬದಿಯನ್ನು ಸ್ವಚ್ಛಗೊಳಿಸಲಯಿತು. ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 02-10-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವತಿಯಿಂದ ಭಾರತ್ ಸ್ಕೌಟ್ಸ್-ಗೈಡ್ಸ್ ಭವನ, ಲಾಲ್‌ಭಾಗ್, ಮಂಗಳೂರಿನಲ್ಲಿ ಗಾಂಧಿ ಜಯಂತಿ ಆಚರಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ರವರು ದೀಪ ಬೆಳಗಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಬಳಿಕ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ಕಾರ್ಯಕ್ರಮದಲ್ಲಿ ಮಂಗಳೂರು ಸ್ಥಳೀಯ ಸಂಸ್ಥೆ ವ್ಯಾಪ್ತಿಯಲ್ಲಿರುವ ವಿವಿಧ ಶಾಲೆಗಳಿಂದ ಸುಮಾರು 100 ಸ್ಕೌಟ್ಸ್-ಗೈಡ್ಸ್‌ಗಳು, ಶಿಕ್ಷಕರ ಸಹಿತ ಭಾಗವಹಿಸಿದರು. ಸರ್ವಧರ್ಮ ಪ್ರಾರ್ಥನೆ ಬಳಿಕ ಭವನದ ಸುತ್ತಮುತ್ತಲು ಹಾಗೂ ಮಹಾನಗರ ಪಾಲಿಕೆಯ ಆಸುಪಾಸಿನಲ್ಲಿ ರಸ್ತೆ ಬದಿಯಲ್ಲಿ ಸ್ವಚ್ಛತೆಯನ್ನು ಮಾಡಲಾಯಿತು. ಈ ಕಾರ್ಯಕ್ರಮದಲ್ಲಿ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾ ಗೈಡ್ಸ್ ಆಯುಕ್ತರು, ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕೋಶಾಧಿಕಾರಿ ಹಾಗು ಮೆನೇಜರ್ ಶ್ರೀ ಭಾಸ್ಕರ್‌ರವರು ಉಪಸ್ಥಿತರಿದ್ದರು. ಶ್ರೀಮತಿ ಸಂಧ್ಯಾರವರು ಕಾರ್ಯಕ್ರಮಕ್ಕೆ ಸಹಕರಿಸಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀಮತಿ ಚಂದ್ರಕಲಾ ಎಸ್. ಮತ್ತು ಜಿಲ್ಲಾ ಸಂಘಟಕರಾದ ಶ್ರೀ ಭರತ್‌ರಾಜ್ ಕೆ. ರವರು ಕಾರ್ಯಕ್ರಮ ಸಂಘಟಿಸಿದರು.

* ದಿನಾಂಕ 02-10-2016 ರಂದು ಗಾಂಧಿ ಜಯಂತಿಯ ಪ್ರಯುಕ್ತ ಶ್ರೀ ಸತ್ಯಸಾಯಿ ಲೋಕಸೇವಾ ಪ್ರೌಢಶಾಲೆ, ಅಳಿಕೆಯ ಸ್ಕೌಟ್ ದಳ ಸ್ವಚ್ಛತಾ ಆಂದೋಲನವನ್ನು ವಿಟ್ಲದ ಸಮುದಾಯ ಆಸ್ಪತ್ರೆಯಲ್ಲಿ ಹಮ್ಮಿಕೊಂಡಿತ್ತು. ಶಾಲಾ ಮುಖ್ಯೋಪಾಧ್ಯಾಯ ಶ್ರೀಯುತ ರಘು ಇವರ ನೇತೃತ್ವದಲ್ಲಿ ಸ್ಕೌಟ್ ಶಿಕ್ಷಕ ಹಾಗೂ 50 ಸ್ಕೌಟ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ವೈದ್ಯ ಡಾ॥ ಪ್ರಶಾಚಿತ್ ಚಾಲನೆ ನೀಡಿದರು.

* ದಿನಾಂಕ 17-09-2016 ರಿಂದ 18-09-2016 ರ ವರೆಗೆ ಮೊಡಂತ್ಯಾರು ಸ್ಥಳಿಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪಟಾಲಂ ಮತ್ತು ಷಟ್ಕ ನಾಯಕರ ತರಬೇತಿ ಶಿಬಿರವನ್ನು ನಡೆಸಲಾಯಿತು. ಸಂಸ್ಥೆಯ ಅಧ್ಯಕ್ಷರಾದ ಹಾಜಿ. ಅಬ್ದುಲ್ ಲತೀಫ್ ಸಾಹೇಬರವರು ಶಿಬಿರವನ್ನು ಉದ್ಘಾಟಿಸಿ ಮಕ್ಕಳು ದೊಡ್ಡವರಾದಂತೆ ಸ್ವಚ್ಛ ಸುಂದರ ಸಮಾಜ ನಿರ್ಮಾಣ ಹಾಗೂ ಸುಭದ್ರವಾದ ರಾಷ್ಟ್ರ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಹರ್ಷ ಕುಮಾರ್ ಎ.ಎಲ್.ಟಿ.(ಸ್ಕೌ) ಮತ್ತು ಶ್ರೀಮತಿ ವಿಮಲಾ ಬಾಯಿ ಎ.ಎಲ್.ಟಿ..(ಫ್ಲಾ) ರವರು ಸಹಕರಿಸಿದರು. ಕಾರ್ಯದರ್ಶಿ ಶ್ರೀ ಎಂ. ಶಾಂತಾರಾಮ್ ಪ್ರಭುರವರು ಸ್ವಾಗತಿಸಿ ಒಡಿಲ್ನಳ ಶಾಲಾ ಮುಖ್ಯ ಶಿಕ್ಷಕರಾದ ಶ್ರೀ ದತ್ತಾತ್ರೇಯ ಗೊಲ್ಲರವರು ವಂದಿಸಿದರು. ಶ್ರೀಮತಿ ಸುಜಾತರವರು ಕಾರ್ಯಕ್ರಮ ನಿರ್ವಹಿಸಿದರು.

## ಗದಗ



ದಿನಾಂಕ 02-09-2016 ರಂದು ಸೋಮೇಶ್ವರ ಪ್ರೌಢಶಾಲೆ, ಕೊಟವುಂಚಗಿಂಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ದೀಕ್ಷಾ ಸಮಾರಂಭವನ್ನು ನಡೆಸಲಾಯಿತು.

ಉದ್ಘಾಟಕರಾಗಿ ಶಾಲೆಯ ಮುಖ್ಯ ಗುರುಗಳಾದ ಶ್ರೀ ಕುಲಕರ್ಣಿ ಭಾಗವಹಿಸಿದ್ದರು. ಅವರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳ ಜಿಲ್ಲಾ ಪುರಸ್ಕಾರ ಹಾಗು ರಾಷ್ಟ್ರಪತಿ ಪುರಸ್ಕಾರ ಪಡೆಯಬೇಕು ಅಂದಾಗ ಮಾತ್ರ ಸಾರ್ಥಕವಾಗುತ್ತದೆ ಎಂದರು. ನಂತರ ಶ್ರೀ ಎ.ಎಸ್. ಶಿವುಕುಮಾರ, ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು.

* ದಿನಾಂಕ 07-09-2016 ರಂದು ದಿ॥ ದೀನದಯಾಳು ನಾಯ್ಡು ರವರ ಶತಮಾನೋತ್ಸವದ ಅಂಗವಾಗಿ ಸೋಮೇಶ್ವರ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಶಾಲೆಯ ಆವರಣವನ್ನು ಸ್ವಚ್ಛಗೊಳಿಸಿ ಸ್ವಚ್ಛಭಾರತ ಆಂದೋಲನವನ್ನು ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಮುಖ್ಯಗುರುಗಳಾದ ಶ್ರೀ ಕುಲಕರ್ಣಿ, ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಸಜ್ಜನರ, ಶ್ರೀಮತಿ ಗೋಧಿ, ಗೈಡ್ಸ್ ಕ್ಯಾಪ್ಟನ್, ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

* ದಿನಾಂಕ 20-09-2016 ರಂದು ಜೆ.ಸಿ. ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಹೊರ ಸಂಚಾರ ನಡೆಸಲಾಯಿತು. ಶಾಲೆಯಿಂದ ಬಿಂಕದಕಟ್ಟೆಯ ವರೆಗೆ ನಡೆದು ಅಲ್ಲಿ ಅನೇಕ ಚಟುವಟಿಕೆಗಳನ್ನು ಮಾಡಲಾಯಿತು. ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಕೊಪ್ಪಳರವರು ಭಾಗವಹಿಸಿದ್ದರು.

* ದಿನಾಂಕ 21-09-2016 ರಂದು ರೈಲ್ವೆ ಶಾಲೆಯಲ್ಲಿ ಅಡುಗೆ ಮಾಡುವ ತರಬೇತಿಯನ್ನು ನಡೆಸಲಾಯಿತು. ಉದ್ಘಾಟಕರಾಗಿ ಶ್ರೀ ಮಯೂರನಾಥ, ಶಾಲೆಯ ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು. ಅವರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹೀಗೆ ವಿವಿಧ ರೀತಿಯ ಕೌಶಲ್ಯಗಳ ತರಬೇತಿಗಳನ್ನು ನೀಡುವುದರಿಂದ ಮಕ್ಕಳು ಉತ್ಸಾಹಭರಿತರಾಗುತ್ತಾರೆ ಹಾಗೂ ಪ್ರೇರಿತವಾಗುತ್ತಾರೆ ಎಂದು ತಿಳಿಸಿದರು. ಶ್ರೀ ಉಮೇಶ್, ಸ್ಕೌಟ್ ಮಾಸ್ಟರ್ ರವರು ನೇತೃತ್ವ ವಹಿಸಿದ್ದರು.

* ದಿನಾಂಕ 22-09-2016 ರಂದು ಸರ್ಕಾರಿ ಹಿ॥ ಪ್ರಾ॥ ಶಾಲೆ, ಮಲ್ಲಸಮುದ್ರದಲ್ಲಿ ಗೈಡ್ಸ್‌ಗಳಿಗೆ ದೀಕ್ಷಾ ಸಮಾರಂಭವನ್ನು ನಡೆಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶಂಕರ್ ವಿ. ಹೂಗಾರ ರವರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಅಂದರೆ ಶಿಸ್ತು ಹಾಗು ಸದಾಸಿದ್ಧನಾಗಿರಬೇಕು ಎಂದು ಹೇಳಿದರು. ಬಿ.ಆರ್.ಸಿ., ಕೋ-ಆರ್ಡಿನೇಟರ್ ಶ್ರೀ ಕಂಬಳಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಜಿ.ಹೆಚ್. ಪೂಜಾರ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಜಕ್ಕಲಿ, ಸಹಕಾರ್ಯದರ್ಶಿ, ಶ್ರೀ ಬಾಳೆಕಾಯಿ, ಗೈಡ್ ಕ್ಯಾಪ್ಟನ್ ಶ್ರೀಮತಿ ಬೇವಿನ ಮರದ ಭಾಗವಹಿಸಿದ್ದರು.

* ದಿನಾಂಕ 23-09-2016 ರಂದು ಕೆ.ಎಸ್.ಎಸ್. ಡಿಗ್ರಿ ಕಾಲೇಜು. ಗದಗದಲ್ಲಿ ರೋವರ್ಸ್-ರೇಂಜರ್ಸ್ ಘಟಕಗಳನ್ನು ಉದ್ಘಾಟಿಸಲಾಯಿತು. ಉದ್ಘಾಟನೆಯನ್ನು ಶ್ರೀಮತಿ ಶಕುಂತಲಾ ಬಾಯಿ ದಂಡಿನ ನೆರವೇರಿಸಿದರು. ಅಧ್ಯಕ್ಷತೆಯನ್ನು ಕಾಲೇಜಿನ ಸಂಸ್ಥಾಪಕರಾದ ಡಾ॥ ಬಿ.ಎಫ್ ದಂಡಿನ ವಹಿಸಿ ಮಾತನಾಡುತ್ತಾ ಭಾರತ್ ಸ್ಕೌಟ್ಸ್-ಗೈಡ್ಸ್, ಶಿಸ್ತು, ಜೀವನ ಕೌಶಲ್ಯ ಹಾಗು ಒಳ್ಳೆಯ ಗುಣಗಳನ್ನು ಬೆಳೆಸುವಂತಹ ಸಂಸ್ಥೆ ಎಂದು ತಿಳಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಡಾ॥ ಟಿ.ಎನ್. ಗೋದಿ, ಪ್ರೊ. ಎಂ.ಸಿ. ವಗ್ಗೆನ್ಯಾಖ ಸಂಯೋಜಕರು, ರೋವರ್ಸ್-ರೇಂಜರ್ಸ್ ಹಾಗೂ ಕಾಲೇಜಿನ ಸಿಬ್ಬಂದಿ ವರ್ಗ ಭಾಗವಹಿಸಿದ್ದರು.

## ಹಾಸನ

ದಿನಾಂಕ : 08-09-2016 ರಂದು ಅರಸೀಕೆರೆ ತಾಲ್ಲೂಕಿನ ಮುರುಂಡಿಯ ಸರ್ಕಾರಿ ಪ್ರೌಢಶಾಲೆಯ "ಪ್ರೇರಣ ಗೈಡ್ ಕಂಪನಿ" ವತಿಯಿಂದ "ಕ್ಯಾಂಟೀನ್ ಡೇ" ಯನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಮುಖ್ಯ ಶಿಕ್ಷಕರಾದ ಶ್ರೀ ಚಂದ್ರೇಗೌಡ ಉದ್ಘಾಟಿಸಿ ಮಾತನಾಡಿ, ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಬಹು ಮುಖ್ಯವಾದ ಚಟುವಟಿಕೆಗಳಲ್ಲಿ ಆಹಾರ ಮೇಳವು ಒಂದು ಎಂದು ಹೇಳಿ ಶುಭ ಹಾರೈಸಿದರು.

ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಜಿಲ್ಲಾ ಸಂಘಟಕ(ಸ್ಕೌಟ್ಸ್) ಶ್ರೀ ಜೆ.ಎಲ್. ಲೀಲಾಮಹೇಶ್ವರ ಮಾತನಾಡಿ ಪ್ರತಿ ಸ್ಕೌಟ್-ಗೈಡ್‌ನ ಸರ್ವತೋಮುಖ ಬೆಳವಣಿಗೆಯ ಉದ್ದೇಶದ ಅನುಸಾರ ಈ ಆಹಾರ ಮೇಳ ಕಾರ್ಯಕ್ರಮವು ಸ್ಫೂರ್ತಿ, ಸ್ವಾವಲಂಬನೆಯಂತಹ ಗುಣಗಳ ಪೋಷಣೆಗೆ ಸಹಕಾರಿ ಎಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಜಿ.ಕೆ. ಗಂಗಾಧರ ಮತ್ತು ತರಬೇತಿ ಸಲಹೆಗಾರರಾದ ಶ್ರೀಮತಿ ಎಂ.ವಿ. ಕುಸುಮ ಭಾಗವಹಿಸಿ ಆಹಾರ ಮೇಳದ ಪ್ರಾಮುಖ್ಯತೆ ಬಗ್ಗೆ ಮಾತನಾಡಿದರು. "ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಶಕುಂತಲ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

* ದಿನಾಂಕ 28-09-2016 ರಂದು ಹಾಸನದ 'ಸರ್ಕಾರಿ ಕಲಾ ಕಾಲೇಜಿನ "ಹಾಸನಾಂಬ ರೋವರ್ ಕ್ರ್ಯೂ ಮತ್ತು ಹಾಸನಾಂಬ ರೇಂಜರ್ ಟೀಂ"ನ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ 'ಅಭಿವಿನ್ಯಾಸ' ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಹುಟ್ಟು, ವಿಶ್ವವ್ಯಾಪಿಯಾಗಿ ಬೆಳೆದು ಬಂದ ಬಗೆ, ಲಾರ್ಡ್ ಬೇಡನ್ ಪೊವೆಲ್ ರವರು ರೂಪಿಸಿರುವಂತೆ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ನಿರೂಪಣೆ, ಉದ್ದೇಶ, ಸಿದ್ಧಾಂತ, ವಿಧಾನಗಳ ಬಗ್ಗೆ ಪರಿಚಯಿಸಲಾಯ್ತು.

ಸ್ಕೌಟಿಂಗ್ ಮತ್ತು ಗೈಡಿಂಗ್ ಇಂದಿನ ಯುವಕ, ಯುವತಿಯರಲ್ಲಿ ಶಿಸ್ತು ಮತ್ತು ಸೇವಾ ಮನೋಭಾವ ರೂಢಿಸುವಲ್ಲಿ, ವ್ಯಕ್ತಿತ್ವ ರೂಪಿಸುವಲ್ಲಿ ಅನುಸರಿಸುವ ವಿಧಾನಗಳು, ಚಟುವಟಿಕಾ ಕ್ರಮಗಳ ಮಹತ್ವದ ಬಗ್ಗೆ ಪರಿಚಯಿಸಲಾಯ್ತು.

ಈ ಕಾರ್ಯಕ್ರಮಕ್ಕೆ ಸಂಪನ್ಮೂಲ ವ್ಯಕ್ತಿಗಳಾಗಿ ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ಮತ್ತು ಜಿಲ್ಲಾ ಸಂಘಟಕ(ಸ್ಕೌಟ್ಸ್) ಶ್ರೀ ಜೆ.ಎಲ್. ಲೀಲಾಮಹೇಶ್ವರ ಭಾಗವಹಿಸಿದ್ದರು. ಈ ಕಾರ್ಯಕ್ರಮವನ್ನು ಕಾಲೇಜಿನ ರೇಂಜರ್ ಲೀಡರ್ ಪ್ರೊ. ಚಂದ್ರಕಲಾ ಮತ್ತು ರೋವರ್ ಸ್ಕೌಟ್ ಲೀಡರ್ ಪ್ರೊ. ಚನ್ನಯ್ಯ ನಡೆಸಿಕೊಟ್ಟರು.

* ದಿನಾಂಕ 30-08-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಸ್ಕೌಟ್-ಗೈಡ್ ಭವನದಲ್ಲಿ ಒಂದು ದಿನದ ಜಿಲ್ಲಾ ಮಟ್ಟದ ರೋವರ್ ಸ್ಕೌಟ್ ಲೀಡರ್ಸ್ ಮತ್ತು ರೇಂಜರ್ ಲೀಡರ್ಸ್‌ಗಳ ಸಮಾವೇಶವನ್ನು ವ್ಯವಸ್ಥೆಗೊಳಿಸಾಗಿತ್ತು.

ಈ ಸಮಾವೇಶವನ್ನು ಪದವಿ ಪೂರ್ವ ಕಾಲೇಜು ವಿಭಾಗದ ಉಪ ನಿರ್ದೇಶಕರಾದ ಶ್ರೀ ಬಿ.ಸಿ. ಜಯದೇವ್ ರವರು ಉದ್ಘಾಟಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡರು ಉಪಸ್ಥಿತರಿದ್ದರು.

51 ರೋವರ್ ಸ್ಕೌಟ್ ಲೀಡರ್ಸ್ ಮತ್ತು ರೇಂಜರ್ ಲೀಡರ್‌ಗಳು ಭಾಗವಹಿಸಿದ್ದರು ಈ ಸಮಾವೇಶಕ್ಕೆ ನಾಯಕರಾಗಿ ಶ್ರೀ ರಾಜೇಶ್ ಅವಲಕ್ಕಿ, ಸಹಾಯಕರಾಗಿ ಡಿಟಿಸಿ(ಸ್ಕೌಟ್ಸ್) ಶ್ರೀ ಎಂ.ಎಸ್. ಪ್ರಕಾಶ್ ಮತ್ತು ಜಿಲ್ಲಾ ಸಂಘಟಕ(ಸ್ಕೌಟ್ಸ್) ಶ್ರೀ ಜೆ.ಎಲ್. ಲೀಲಾಮಹೇಶ್ವರ, ಪ್ರೊ. ಬೋರೇಗೌಡ ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 20-09-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಸಾಮಾನ್ಯ ಸಭೆ ಮಧ್ಯಾಹ್ನ 2.30ಕ್ಕೆ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿಯಲ್ಲಿ ಜರುಗಿತು. ಅಧ್ಯಕ್ಷತೆಯನ್ನು ಡಾ॥ ಎಂ.ವಿ. ವೆಂಕಟೇಶ, ಭಾ.ಆ.ಸೇ., ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿ.ಎಸ್.ಜಿ. ರವರು ವಹಿಸಿದ್ದರು. ಸಭೆಯಲ್ಲಿ ಮುಖ್ಯವಾದ ವಿಷಯ ಜಿಲ್ಲೆಯ ಪ್ರತಿಯೊಂದು ಗ್ರಾಮ ಪಂಚಾಯತ್ ವತಿಯಿಂದ ಎಸ್.ಸಿ./ಎಸ್.ಟಿ., ಮಕ್ಕಳಿಗೆ ಸಮವಸ್ತ್ರ 25%. ನಗರದ ಶಾಲೆಗಳಿಗೆ ನಗರಸಭೆಯಿಂದ ಕೊಡಿಸುವುದಾಗಿ ಮತ್ತು ಜಿಲ್ಲಾ ಸಂಸ್ಥೆಯ ತರಬೇತಿ ಕೇಂದ್ರ ಅಭಿವೃದ್ಧಿ ಮಾಡುವ ಬಗ್ಗೆ ವಿಶೇಷವಾಗಿ



ದಳಗಳು ಪ್ರಾರಂಭವಾಗಬೇಕು ಕಡ್ಡಾಯವಾಗಿ ನೋಂದಣಿ ಆಗಬೇಕು ಎಂದು ಶ್ರೀ ಶಿವನಗೌಡ ಪಾಟೀಲ, ಡಿ.ಡಿ.ಪಿ.ಐ., ಮತ್ತು ಜಿಲ್ಲಾ ಆಯುಕ್ತ(ಸ್ಕೌಟ್) ರವರಿಗೆ ಆದೇಶ ನೀಡಿದರು. ಮಕ್ಕಳಿಂದ ಹೆಚ್ಚು ಚಟುವಟಿಕೆ, ಶ್ರಮದಾನ ಕಾರ್ಯಕ್ರಮ ಮಾಡಿ ಎಂದು ತಿಳಿಸಿದರು. ಸಭೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಶ್ರೀಮತಿ ಮಾಧರಿ ದೇವಧರ ಶ್ರೀಮತಿ ಶೋಭಾ ಕರ್ಜಗಿ, ಡಿ.ಸಿ.(ಜಿ) ಶ್ರೀ ಎಸ್.ಬಿ. ಪಾಟೀಲ ಡಿ.ಡಿ.ಪಿ.ಐ., ಮತ್ತು ಡಿ.ಸಿ.(ಎಸ್) ಡಿ.ಎಸ್.ಪಿ. ಬಿ.ಹೆಚ್.ಎನ್. ರಾವಳ, ಎಲ್ಲಾ ತಾಲ್ಲೂಕಿನ ಬಿ.ಇ.ಓ., ಮತ್ತು ಪಿ.ಇ.ಓ., ಎ.ಡಿ.ಸಿ.(ಎಸ್)) ಮತ್ತು ಜಿಲ್ಲಾ ಸ್ಥಾನಿಕ ಆಯುಕ್ತರು ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆಯ ಆಜೀವ ಸದಸ್ಯರು, ಎಲ್ಲಾ ತಾಲೂಕುಗಳ ಕಾರ್ಯದರ್ಶಿಗಳು ಪ್ರತಿನಿದಿಗಳ ಒಟ್ಟು 73 ಸಭೆಯಲ್ಲಿ ಪಾಲ್ಗೊಂಡರು. ಡಿ.ಸಿ.ಸಿ., ಯವರು ಸ್ವಾಗತಿಸಿದರು. ಡಿ.ಓ.ಸಿ., ಮತ್ತು ಡಿ.ಟಿ.ಸಿ. ಯವರು ಸಭೆಯ ವಿಷಯ ಮಂಡನೆ ಮಾಡಿದರು.

## ಕಾರವಾರ

ದಿನಾಂಕ 21-09-2016 ರಂದು ವಿಶ್ವಶಾಂತಿ ದಿನಾಚರಣೆಯನ್ನು ಕಾರವಾರ ಜಿಲ್ಲಾ ಸಂಸ್ಥೆ ಹಾಗೂ ಹೊನ್ನಾವರ ಸ್ಥಳೀಯ ಸಂಸ್ಥೆಯವರು ಹೊನ್ನಾವರದಲ್ಲಿ ಏರ್ಪಡಿಸಿದ್ದರು. ಮುಂಜಾನೆ 9 ಗಂಟೆಗೆ ಹೋಲಿ ರೋಸರಿ ಕಾನ್ವೆಂಟ್ ಹೈಸ್ಕೂಲಿನಿಂದ ಜಾಥಾ ಆರಂಭಿಸಲಾಯಿತು. ಜಾಥಾವನ್ನು ಉದ್ದೇಶಿಸಿ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀಮತಿ ಶ್ರೀಕಲಾಶಾಸ್ತ್ರಿಯವರು ಮಾತನಾಡಿ ವಿಶ್ವಶಾಂತಿಯ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ತಿಳಿಸಿದರು. ನಾವೆಲ್ಲ ಪ್ರೀತಿ, ವಿಶ್ವಾಸ, ಸಹಬಾಳ್ವೆಯಿಂದ ಇರಬೇಕು ಎಂದರು. ಈ ಜಾಥಾವನ್ನು ಜಿಲ್ಲಾ ಪ್ರಧಾನ ಆಯುಕ್ತರಾದ ಡಾ. ಜಿ.ಜಿ. ಸಭಾಹಿತ ರವರು ಹಸಿರು ನಿಶಾನೆ ತೋರಿಸುವುದರ ಮೂಲಕ ಉದ್ಘಾಟಿಸಿದರು.



ಜಾಥಾವು ಹೊನ್ನಾವರದ ಪ್ರಮುಖ ರಸ್ತೆಯಲ್ಲಿ ತೆರಳಿ ಕೊನೆಯಲ್ಲಿ ಅರಕ್ಷ ಠಾಣೆಯ ಮುಂಭಾಗದಲ್ಲಿ ಮುಕ್ತಾಯ ಗೊಳಿಸಲಾಯಿತು. ಈ ಸಂದರ್ಭದಲ್ಲಿ ಮಕ್ಕಳನ್ನು ಉದ್ದೇಶಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎಸ್. ಭಟ್‌ರವರು ಮಾತನಾಡಿ ವಿಶ್ವಶಾಂತಿಯ ಮಹತ್ವದ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ತಿಳಿಸಿದರು. ಪಿ.ಎಸ್.ಐ., ಕ್ರೈಂ ಬ್ರ್ಯಾಂಚ್‌ನ ಶ್ರೀ ಗಣೇಶ್ ರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಿತವಚನ ನೀಡಿದರು. ಈ ಸಮಾರಂಭದಲ್ಲಿ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಎಸ್.ಎನ್. ಗೌಡಾ ಹಾಗೂ ಹಲವು ಗಣ್ಯರು ಉಪಸ್ಥಿತರಿದ್ದರು. ಶ್ರೀ ಬಿ.ಡಿ. ಫರ್ನಾಂಡೀಸ್ ಸ್ವಾಗತಿಸಿದರು. ಶ್ರೀ ಪ್ರಸನ್ನ ಶೇಟ್ ರವರು ವಂದಿಸಿದರು.

## ಕೋಲಾರ

ದಿನಾಂಕ 19-09-2016 ರಂದು ಕೋಲಾರ ನಗರದ ಆಲ್ ಅಮೀನ್ ಕಾಲೇಜಿನಲ್ಲಿ ನಡೆದ ಜಿಲ್ಲಾ ಮಟ್ಟದ ಪ್ರತಿಭಾ ಕಾರಂಜಿಯಲ್ಲಿ ಜಿಲ್ಲೆಯ ರೋವರ್ಸ್‌ಗಳು ಸೇವೆಯನ್ನು ಸಲ್ಲಿಸಿದರು. ಇಲ್ಲಿ ನೊಂದಣಿ ವಿಭಾಗ, ವೇದಿಕೆ, ವಿವಿಧ ಕಾರ್ಯಕ್ರಮಗಳಲ್ಲಿ ಮಜ್ಜಿಗೆ ವಿತರಣೆ, ಆಹಾರ ವಿತರಣೆಯಲ್ಲಿ ಸೇವೆ ಸಲ್ಲಿಸಿದರು. ನಂತರ ಆವರಣವನ್ನು ಸ್ವಚ್ಛಗೊಳಿಸಲಾಯಿತು.

* ದಿನಾಂಕ 21-09-2016 ಮತ್ತು 22-09-2016 ರಂದು ಟಿ. ಚನ್ನಯ್ಯ ರಂಗಮಂದಿರದಲ್ಲಿ ನಡೆದ 15ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಜಿಲ್ಲೆಯ 120 ರೋವರ್ಸ್ ಮತ್ತು ರೇಂಜರ್ಸ್‌ಗಳು ಸೇವೆಯನ್ನು ಸಲ್ಲಿಸಿದರು.

ಸಮ್ಮೇಳನದಲ್ಲಿ ಮೆರವಣಿಗೆ, ವೇದಿಕೆ, ಆಹಾರ ವಿತರಣೆ, ಪುಸ್ತಕ ಪ್ರದರ್ಶನ ಸಮ್ಮೇಳನದ ಹೆಬ್ಬಾಗಿಲು, ಹಾಗೂ ವಿವಿಧ ವಿಭಾಗಗಳಲ್ಲಿ ತಮ್ಮ ಸೇವೆ ಸಲ್ಲಿಸಿದರು. ಇದೇ ದಿನಾಂಕ ಹೆಬ್ಬಾಳ ಶಾಸಕರಾದ ಮಾನ್ಯ ಶ್ರೀ ವೈ.ಎ. ನಾರಾಯಣಸ್ವಾಮಿ ಯವರು ಎಂ.ಓ.ಪಿ. ಧ್ವಜಗಳನ್ನು ಬಿಡುಗಡೆ ಮಾಡಿದರು. ನಗರದ ಪ್ರಮುಖ ರಸ್ತೆಗಳಲ್ಲಿ ಜಾಥಾ ಹೊರಟು ಶಾಂತಿಯ ಸಂದೇಶ ಸಾರಲಾಯಿತು.

* ದಿನಾಂಕ 22-09-2016 ರಂದು ಕಾಮಸಮುದ್ರದಲ್ಲಿನ ಮುರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಜಿಲ್ಲಾ ಮಟ್ಟದ ಅಂತರ ರಾಷ್ಟ್ರೀಯ ಶಾಂತಿ ದಿನಾಚರಣೆಯನ್ನು ಆಚರಿಸಲಾಯಿತು. ಈ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಭಾರತಮ್ಮ ರವರು ಎಂ.ಓ.ಪಿ. ಧ್ವಜಗಳನ್ನು ಬಿಡುಗಡೆ ಮಾಡಿದರು. ಶಾಲೆಯ ಸ್ಕೌಟ್ಸ್ ಶಿಕ್ಷಕರಾದ ಶ್ರೀ ಗುರು ಅಂಬಿಗೇರ್, ಗೈಡ್ ಶಿಕ್ಷಕಿ ಶ್ರೀಮತಿ ದಾಕ್ಷಾಯಿಣಿ, ಬಂಗಾರಪೇಟೆ ಎಲ್.ಎ. ಕಾರ್ಯದರ್ಶಿ ಶ್ರೀ ನಂಜುಂಡಪ್ಪ, ಜಿಲ್ಲಾ ಸಂಘಟಕ ವಿ. ಬಾಬು ಭಾಗವಹಿಸಿದ್ದರು. ಗ್ರಾಮದ ಪ್ರಮುಖ ಬೀದಿಗಳಲ್ಲಿ ಜಾಥಾ ಹೊರಟು ಶಾಂತಿಯ ಸಂದೇಶ ಸಾರಲಾಯಿತು. ಈ ಗ್ರಾಮದ ಪ್ರಮುಖ ಬೀದಿಗಳಲ್ಲಿ ಕಸ ಸಂಗ್ರಹಿಸಿ ಸ್ವಚ್ಛತೆಯನ್ನು ಮಾಡಲಾಯಿತು.

* ದಿನಾಂಕ 02-10-2016 ರಂದು ಸರ್ಕಾರಿ ಮಹಿಳಾ ಕಾಲೇಜಿನಲ್ಲಿ ಗಾಂಧಿ ಜಯಂತಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿಯವರ ಜಯಂತಿ ಆಚರಿಸಲಾಯಿತು. ಬೆಳಗ್ಗೆ 7 ಗಂಟೆ ಸರ್ವಧರ್ಮ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ನಂತರ ಕಾಲೇಜು ಆವರಣವನ್ನು ಸ್ವಚ್ಛಗೊಳಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಪ್ರಾಂಶುಪಾಲರಾದ ಶ್ರೀ ಅಶ್ವತಪ್ಪ, ಕಾಲೇಜು ಅಭಿವೃದ್ಧಿ ಸಮಿತಿ ಅಧ್ಯಕ್ಷರಾದ ಶ್ರೀ ನೆಡುಪಳ್ಳಿ ಕೃಷ್ಣಮೂರ್ತಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಜಿಲ್ಲಾ ಸಂಘಟಕ ಶ್ರೀ ವಿ. ಬಾಬು, ಹಾಗೂ ಜಿಲ್ಲಾ ಪದಾಧಿಕಾರಿಗಳು ಮತ್ತು ವಿವಿಧ ಶಾಲೆ ಕಾಲೇಜಿನ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಉಡುಪಿ



ದಿನಾಂಕ 02-10-2016 ರಂದು ಗಾಂಧಿ ಜಯಂತಿಯ ಪ್ರಯುಕ್ತ ಮಂಜುನಾಥ ಪೈ ಸ್ಮಾರಕ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಸಮೀಪದ ಹಳ್ಳಿಗಳಿಗೆ ಭೇಟಿ ನೀಡಿ ಕರಪತ್ರಗಳನ್ನು ವಿತರಿಸಿ ಪರಿಸರ ಸಂರಕ್ಷಣೆ ಮತ್ತು ಮಕ್ಕಳನ್ನು ಉತ್ತಮ ವ್ಯಕ್ತಿಗಳನ್ನಾಗಿ ರೂಪಿಸುವಲ್ಲಿ ಪೋಷಕರ ಜವಾಬ್ದಾರಿಯ ಕುರಿತು ಅರಿವನ್ನು ಮೂಡಿಸುವ ಕಾರ್ಯವನ್ನು ಹಮ್ಮಿಕೊಂಡರು. ಅಲ್ಲದೆ ಜನರಲ್ಲಿ ಬದಲಾಗುತ್ತಿರುವ ಜೀವನ ಶೈಲಿ ಮತ್ತು ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯ ಅಭಿವೃದ್ಧಿಯನ್ನು ಕುರಿತು ಸಮೀಕ್ಷೆಯನ್ನು ನಡೆಸಿದರು.

ಅಭಿಯಾನಕ್ಕೆ ಚಾಲನೆ ನೀಡಿ ಮಾತನಾಡಿದ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಂ. ಶ್ರೀವರ್ಮ ಅಜ್ರಿ ಇಂತಹ ಕಾರ್ಯಕ್ರಮಗಳು ಸಮಾಜಕ್ಕೆ ಕೊಡುಗೆಯನ್ನು ನೀಡುವುದರ ಜೊತೆಗೆ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಸನಕ್ಕೂ ಸಹಕಾರಿಯಾಗಲಿ ಎಂದು ಶುಭ ಹಾರೈಸಿದರು. ಕಾರ್ಯಕ್ರಮವನ್ನು ರೋವರ್ಸ್ ಸ್ಕೌಟ್‌ಲೀಡರ್ ಶ್ರೀ ಕೃಷ್ಣಮೂರ್ತಿ ವೈದ್ಯ ನಿರ್ವಹಿಸಿದರು. ರೇಂಜರ್ಸ್ ಲೀಡರ್ ಶ್ರೀಮತಿ ಜ್ಯೋತಿ ಎಲ್.ಜೆ. ಪ್ರಾಸ್ತಾವಿಕವಾಗಿ ಮಾತನಾಡಿ ಸಮೀಕ್ಷೆ ನಡೆಸುವ ಬಗ್ಗೆ ಮಾರ್ಗದರ್ಶನ ನೀಡಿದರು. ಕಾಲೇಜಿನ ಸುಮಾರು 95 ರೋವರ್ಸ್ ಮತ್ತು ರೇಂಜರ್ಸ್‌ಗಳು ಅಭಿಯಾನದಲ್ಲಿ ಪಾಲ್ಗೊಂಡಿದ್ದರು.

* ದಿನಾಂಕ 02-10-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ ಗಾಂಧಿ ಜಯಂತಿ ಪ್ರಯುಕ್ತ ಉಡುಪಿ ರೈಲು ನಿಲ್ದಾಣದಲ್ಲಿ ಸರ್ವಧರ್ಮ ಪ್ರಾರ್ಥನೆ ಹಾಗು ಸ್ವಚ್ಛತಾ ಕಾರ್ಯಕ್ರಮವನ್ನು ನಡೆಸಲಾಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಸಹ ಆಯುಕ್ತರಾದ ಶ್ರೀ ಸುಬ್ರಮಣ್ಯ ಬಾಸ್ರಿ ರವರು ಗಾಂಧಿ ಜಯಂತಿಯ ಮಹತ್ವ ತಿಳಿಸಿದರು.

ಹಾಗೂ ಮಾಧವ ಕೃಪಾ ಆಂಗ್ಲ ಮಾಧ್ಯಮ ಶಾಲೆಯ ಗೈಡ್ ಶಿಕ್ಷಕಿ ಶ್ರೀಮತಿ ಮಲ್ಲಿಕಾ ಹಾಗೂ ಸವಿನಯ, ದಿವ್ಯ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶ್ರೀಮತಿ ಜ್ಯೋತಿ ಆಚಾರ್ಯ, ಮಾಧವ ಪೈ ಮೆಮೋರಿಯಲ್ ಕಾಲೇಜು ಮಣಿಪಾಲ ಇವರು ಹಾಗು ರೋವರ್ ಸ್ಕೌಟ್ ಲೀಡರ್‌ಗಳಾದ ಶ್ರೀ ರಾಘವೇಂದ್ರ ಹಾಗೂ ಶ್ರೀ ವಿತೇಶ್ ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮೀನ್ ಹಾಗು ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮವನ್ನು ಸಂಘಟಿಸಿದರು. ಶಾಲಾ ಕಾಲೇಜಿನ 100 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್‌ಗಳು ಭಾಗವಹಿಸಿದ್ದರು.

## ವಿಜಯಪುರ

ದಿನಾಂಕ 02-10-2016 ರಂದು ನಿತ್ಯ ಜೀವನದಲ್ಲಿ ನಾವೆಲ್ಲರೂ ಸತ್ಯ ಮತ್ತು ಶಾಂತಿ ಪಾಲನೆ ಮಾಡಿದಲ್ಲಿ ಸಂತೃಪ್ತ ಜೀವನ ಪಡೆಯಲು ಸಾಧ್ಯವಿದ್ದು, ಗಾಂಧೀಜಿಯವರು ಇದನ್ನು ತಮ್ಮ ಜೀವನದುದ್ದಕ್ಕು ಪಾಲಿಸಿಕೊಂಡು ಬಂದಿದ್ದರು ಎಂದು ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ಎಲ್. ಇಂಗಳೇಶ್ವರ್ ಅವರು ತಿಳಿಸಿದರು. ಅವರು ಜಿಲ್ಲಾ ಸ್ಕೌಟ್ ಭವನದಲ್ಲಿ ನಡೆದ ಗಾಂಧೀ ಜಯಂತಿ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಮಾತನಾಡಿದರು.

ಜಿಲ್ಲಾ ಪ್ರದಾನ ಆಯುಕ್ತ ಶ್ರೀ ಸಿದ್ದಣ್ಣ ಎಮ್. ಸಕ್ರಿ ಅಧ್ಯಕ್ಷತೆ ವಹಿಸಿದ್ದರು. ಖಜಾಂಚಿ ಶ್ರೀ ಸಹಜಾನಂದ ದಂಧರಗಿ, ಸಹ ಕಾರ್ಯದರ್ಶಿ ಶ್ರೀ ಶರಣು ಸಬರದ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಜೈನ್ ಪಬ್ಲಿಕ್ ಶಾಲಾ ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ ಮಾಸ್ಟರ್ ಶ್ರೀ ಎನ್. ಷಡಕ್ಷರದೇವ ಹಾಗೂ ಗೈಡ್ ಕ್ಯಾಪ್ಟನ್ ಶ್ರೀಮತಿ ಅನಿತಾ ಪಾಲ್ಗೊಂಡಿದ್ದರು.

ಇದಕ್ಕೂ ಪೂರ್ವದಲ್ಲಿ ಜಿಲ್ಲಾಡಳಿತ ಹಮ್ಮಿಕೊಂಡಿದ್ದ ಗಾಂಧೀ ಜಯಂತಿ ಕಾರ್ಯಕ್ರಮದ ಜಾಥಾದಲ್ಲಿ ಗಾಂಧೀ ವೃತ್ತದಿಂದ ಕಂದಗಲ್ ಹಣಮಂತರಾಯ ರಂಗಮಂದಿರದವರೆಗೆ ಜೈನ್ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಕಾರ್ಯಕ್ರಮ ನಿರ್ವಹಣೆ ಮಾಡಿದರು.

## Congratulations



**Region Appreciation Award**

Asia Pacific Region

World Association
of Girl Guides
and Girl Scouts

Awarded to
SAROJA .P

of BHARAT SCOUTS AND GUIDES, INDIA

*For having contributed outstanding service
to the development of Girl Guiding/Girl Scouting
in the Asia Pacific Region*

2016

Low Lih Jeng
Chairman, Asia Pacific Regional Committee

Ching Ching Wee-Ong
Regional Director, Asia Pacific





Sri Prabhudeva J Chigateri, State Treasurer, Karnataka met with Mr. Joe Squeri, District Director of Mount Diablo Silverado Council, California of the Boy Scouts of America and invited him to participate in the 17th National Jamboree to be held during December 2016 at Mysuru, India.




World assciation of Girl Guides and Girl Scouts is the Global body to which we are associated. WAGGGS has 5 regions and each of it is run by a 6 member committee, elected triannually. Kum. Meghana of Karnataka is the youngest elected member of the Asia Pacific Regional Committee and she is the first Indian to be on the Committee.



ಕಾರವಾರ ಜಿಲ್ಲಾ ಸಂಸ್ಥೆಯ ಕೌನ್ಸಿಲ್ ಸಭೆಯು ಜಿಲ್ಲಾಧಿಕಾರಿಗಳಾದ ಶ್ರೀ ಎಸ್.ಎಸ್. ನಕುಲ, ಭಾ.ಆ.ಸೇ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಜಿ. ಸಭಾಹಿತ್ ಹಾಗೂ ಇತರ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಕಲಬುರಗಿ ಜಿಲ್ಲೆಗೆ ಹೊಸದಾಗಿ ಆಗಮಿಸಿದ ಜಿಲ್ಲಾಧಿಕಾರಿ ಶ್ರೀ ಪ್ರಜ್ವಲ್ ಕುಮಾರ್, ಭಾ.ಆ.ಸೇ ಅವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸ್ವಾಗತವನ್ನು ಕೋರಿದರು. ಚಿತ್ರದಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಎಸ್.ಪಿ. ಸುಳ್ಳದ್, ಶ್ರೀಮತಿ ಕಮಲಾದೇವಿ ಚಿಕ್ಕಮಠ, ಶ್ರೀಮತಿ ವಿಮಲಾ ಹೊಸಮನಿ, ಶ್ರೀ ಎಂ. ಗೋಪಾಲ್‌ರಾವ್, ಶ್ರೀ ವೈ. ವೀರಭದ್ರಯ್ಯ, ಡಿ.ಓ.ಸಿ., ಶ್ರೀ ಜಯಪ್ರಕಾಶ್ ಹಾಗೂ ಇತರರನ್ನು ಕಾಣಬಹುದು.



02 ಸೆಪ್ಟೆಂಬರ್ 2016ರಂದು ಚಾಮರಾಜನಗರ ಜಿಲ್ಲಾ ಸಂಸ್ಥೆಯಲ್ಲಿ ಜರುಗಿದ ಜಿಲ್ಲಾ ಪರಿಷತ್ ಸಭೆಯು ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಮತಿ ಯಪ್ಸಿಬಾರಾಣಿ ಕುಲಕರ್ಣಿ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಜಿ.ಆರ್. ಅಶ್ವತ್ಥನಾರಾಯಣ, ಉಪನಿರ್ದೇಶಕಿ ಶ್ರೀಮತಿ ಮಂಜುಳಾ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಅವರುಗಳು ಚಿತ್ರದಲ್ಲಿದ್ದಾರೆ.



21 ಸೆಪ್ಟೆಂಬರ್ 2016ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆಯಲ್ಲಿ ಜರುಗಿದ ವಿಶ್ವಶಾಂತಿ ದಿನಾಚರಣೆ ಕಾರ್ಯಕ್ರಮದಲ್ಲಿ ಶ್ರೀ ಎಂ. ರೇವಣಸಿದ್ಧಪ್ಪ, ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಪಿ.ಎಲ್. ಸುರೇಶ್‌ರಾಜು, ಜಿಲ್ಲಾ ಸ್ಕೌಟ್ ಆಯುಕ್ತರು, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಎ. ಲಿಂಗಾರೆಡ್ಡಿ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340
Posted at: Bengaluru PSO, Mysore Road, Bengaluru-26 on 28 & 30 every Month (No. of Pages: 04+32 = 36)

## ವಿವಿಧ ಜಿಲ್ಲಾ ಸಂಸ್ಥೆಗಳ ಆಶ್ರಯದಲ್ಲಿ ಜರುಗಿದ ವಿವಿಧ ಕಾರ್ಯಕ್ರಮಗಳ ವಿಹಂಗಮ ನೋಟ



ಉಡುಪಿ ಜಿಲ್ಲೆಯಲ್ಲಿ ಜರುಗಿದ ವನಮಹೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು



ಚಾಮರಾಜನಗರ ಜಿಲ್ಲೆಯಲ್ಲಿ ಜರುಗಿದ ಗಾಂಧೀಜಯಂತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು





ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜರುಗಿದ "ಸ್ವಚ್ಛ ಭಾರತ್" ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು





ಹಾವೇರಿ ಜಿಲ್ಲೆಯಲ್ಲಿ ಜರುಗಿದ "ಮೆಸೆಂಜರ್ ಆಫ್ ಪೀಸ್" ಮತ್ತು "ಸ್ವಚ್ಛ ಭಾರತ್" ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳು



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26